CPMG / KA / BG-GPO/13/2003-2005




# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೦ | ಬೆಂಗಳೂರು, ಗುರುವಾರ, ಏಪ್ರಿಲ್ ೭, ೨೦೦೫ (ಚೈತ್ರ ೧೭, ಶಕ ವರ್ಷ ೧೯೨೭) | ಸಂಚಿಕೆ ೧೪ |
|---|---|---|


## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ನ್ಯಾಯಾಲಯ, ಭದ್ರಾವತಿ ವಿಭಾಗ, ಭದ್ರಾವತಿ**

**ಸಂಖ್ಯೆ: ಎಫ್‌ಓಸಿ.ಸಿಓಎನ್.ಸಿಆರ್ 20/93-94, ದಿನಾಂಕ: 21ನೇ ಫೆಬ್ರವರಿ 2005**

**ನಿರೂಪಣಾಧಿಕಾರಿ:** ಶ್ರೀಮತಿ ಸೀಮಾಗರ್ಗ್, ಭಾಅಸೇ.,
ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಭದ್ರಾವತಿ ವಿಭಾಗ, ಭದ್ರಾವತಿ.

**ಫಿರ್ಯಾದಿದಾರರು:** ವಲಯ ಅರಣ್ಯಾಧಿಕಾರಿ, ಉಂಬಳೆಬೈಲು ವಲಯ, ಉಂಬಳೆಬೈಲು.

**ಅರ್ಜಿದಾರರು:** ಶ್ರೀ ಎಂ.ಆರ್. ಚಂದ್ರಶೇಖರ್ ಬಿನ್ ಎಂ. ರಾಮು, ನಾಗಪ್ಪನ ಕೇರಿ ವಾಸಿ, ಗಾಂಧಿ ಬಜಾರ್, ಶಿವಮೊಗ್ಗ.

**ಪ್ರಕರಣದ ಹಿನ್ನೆಲೆ:**

ದಿನಾಂಕ: 12.2.94 ರಂದು ವಲಯ ಅರಣ್ಯಾಧಿಕಾರಿ, ಉಂಬಳೆಬೈಲು ವಲಯ ಹಾಗೂ ಸಿಬ್ಬಂದಿಯವರು ಲಕ್ಕಿನಕೊಪ್ಪ ಅರಣ್ಯ ತನಿಖಾ ಠಾಣೆಯ ಬಳಿ ಕಾಯುತ್ತಿರುವಾಗ ತೋಟದ ಕಡೆಯಿಂದ ಶಿವಮೊಗ್ಗದ ಕಡೆಗೆ ಒಂದು ಆಟೋರಿಕ್ಷಾ ಬರುತ್ತಿರುವುದನ್ನು ತಡೆದು ಪರಿಶೀಲಿಸಿದಾಗ ವಾಹನದಲ್ಲಿ ಮರದ ತುಂಡುಗಳಿದ್ದು ಅವುಗಳ ವಾಸನೆಯಿಂದ ಸದರಿ ತುಂಡುಗಳು ಶ್ರೀಗಂಧದ ತುಂಡುಗಳು ಎಂದು ಖಚಿತಪಡಿಸಿಕೊಂಡು ಸದರಿ ಶ್ರೀಗಂಧದ ತುಂಡುಗಳು ಸರ್ಕಾರದ ಸ್ವತ್ತಾಗಿದ್ದು ಅವುಗಳ ಸಾಗಾಣಿಕೆಯು ಅಕ್ರಮ ಎಂದು ತೀರ್ಮಾನಿಸಿ ಶ್ರೀಗಂಧವನ್ನು, ವಾಹನವನ್ನು ಹಾಗೂ ವಾಹನದ ಚಾಲಕ ವಿಜಯ ಬಿನ್ ಪೂಜಾರಿ ರಾಜಪ್ಪನನ್ನು ವಶಪಡಿಸಿಕೊಂಡಿರುತ್ತಾರೆ. ಮುಂದುವರೆದು ಸದರಿ ಶ್ರೀಗಂಧದ ತುಂಡುಗಳನ್ನು ಎಣಿಕೆ ಮಾಡಿ 1 ರಿಂದ 28 ರವರೆಗೆ ಕ್ರಮ ಸಂಖ್ಯೆ ನೀಡಿ ಇಲಾಖಾ ಛಾಪಾ ಮುದ್ರಿಸಿ ಸ್ಥಳದಲ್ಲಿ ಪಂಚರ ಸಮಕ್ಷಮ ಪಂಚನಾಮೆಯನ್ನು ಜರುಗಿಸಿರುತ್ತಾರೆ. ವಶಪಡಿಸಿಕೊಂಡ ವಾಹನ, ಶ್ರೀಗಂಧ ತುಂಡುಗಳು ಹಾಗೂ ಅಪರಾಧಿಯನ್ನು ಮುಂದಿನ ಕ್ರಮಕ್ಕಾಗಿ ವಲಯ ಅರಣ್ಯಾಧಿಕಾರಿ ಕಛೇರಿಗೆ ತೆಗೆದುಕೊಂಡು ಹೋಗಿರುತ್ತಾರೆ ಸದರಿ ಪ್ರಕರಣವನ್ನು ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ಪ್ರಕಾರ ಕ್ರಮ ಜರುಗಿಸಲು ಈ ನ್ಯಾಯಾಲಯದ ಸಮಕ್ಷಮ ವಾಹನ ಹಾಗೂ ಶ್ರೀಗಂಧದ ತುಂಡುಗಳನ್ನು ಹಾಜರುಪಡಿಸಿ ಕೋರಿಕೊಂಡಿರುತ್ತಾರೆ. ಪ್ರಕರಣದ ಕಡತವನ್ನು ಪರಿಶೀಲಿಸಿ ಅರಣ್ಯ ಕಾಯಿದೆ 71(ಎ) ಪ್ರಕಾರ ಕ್ರಮ ಜರುಗಿಸಿ ವಶಪಡಿಸಿಕೊಂಡ ವಾಹನ ಹಾಗೂ ಅರಣ್ಯ ಉತ್ಪನ್ನವನ್ನು ವಲಯ ಅರಣ್ಯಾಧಿಕಾರಿ ಉಂಬಳೆಬೈಲು ವಲಯ, ಉಂಬಳೆಬೈಲುರವರ ವಶಕ್ಕೆ ಸುರಕ್ಷತೆಗೆ ನೀಡಿರುತ್ತದೆ.

ದಿನಾಂಕ: 25.2.1994 ರಂದು ಅರ್ಜಿದಾರರು ವಕೀಲರ ಮುಖಾಂತರ ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿ ಅರಣ್ಯ ಅಪರಾಧ ಪ್ರಕರಣದಲ್ಲಿ ವಶಪಡಿಸಿಕೊಂಡ ಆಟೋರಿಕ್ಷಾ ಸಂಖ್ಯೆ: ಸಿ.ಟಿ.ಎಸ್. 7089ರ ಮಾಲೀಕನಾಗಿರುತ್ತೇನೆ ಸದರಿ ವಾಹನವನ್ನು ಜೀವನ ನಿರ್ವಹಣೆಗೆ ಇಟ್ಟುಕೊಂಡಿರುತ್ತೇನೆ ವಾಹನವನ್ನು ಇಲಾಖಾ ವಶದಲ್ಲಿಟ್ಟುಕೊಂಡರೆ ವಾಹನವು ಉಪಯೋಗಕ್ಕೆ ಬಾರದೇ ಹಾಳಾಗುವ ಸಾಧ್ಯತೆಯಿರುತ್ತದೆ. ವಾಹನದಲ್ಲಿ ಅರಣ್ಯ ಅಪರಾಧ ನಡೆದಿರುತ್ತದೆ ಎಂಬುದು ತನಗೆ ಮಾಹಿತಿ ಇರುವುದಿಲ್ಲ. ವಾಹನವನ್ನು ಬಿಡುಗಡೆ ಮಾಡಬೇಕಾಗಿ ವಿನಂತಿಸಿರುತ್ತಾರೆ.

ದಿನಾಂಕ: 28.3.1994 ರಂದು ವಾಹನದ ಮಾಲೀಕರಿಗೆ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ಪ್ರಕಾರ ಕಾರಣ ಕೇಳಿ ತಿಳುವಳಿಕೆ ಪತ್ರ ನೀಡಿರುತ್ತದೆ ವಾಹನದ ಮಾಲೀಕರು ದಿನಾಂಕ: 30.3.94 ರಂದು ಸಮಜಾಯಿಸಿ ನೀಡಿ ಅರಣ್ಯ ಅಪರಾಧ ಪ್ರಕರಣಕ್ಕೂ ತನಗೂ ಯಾವುದೇ ಸಂಬಂಧ ಇರುವುದಿಲ್ಲ ನಾನು ವಾಹನವನ್ನು ಡ್ರೈವರ್ ಸಂಗಡ ಬಾಡಿಗೆಗೆ ವಾಹನವನ್ನು ಕಳುಹಿಸಿರುತ್ತೇನೆ. ಪ್ರತಿದಿನ ವಾಹನವನ್ನು ಬೆಳಿಗ್ಗೆ 8.00 ಗಂಟೆಗೆ ತೆಗೆದುಕೊಂಡು ಹೋಗಿ ರಾತ್ರಿ 8.00 ಘಂಟೆಗೆ ವಾಹನವನ್ನು ಮನೆಗೆ ತಂದು ರಾತ್ರಿ ನಿಲ್ಲಿಸುತ್ತಿದ್ದನು ಹಾಗೂ ಪ್ರತಿ ನಿತ್ಯ 35/- ರೂ.ಗಳ ಬಾಡಿಗೆ ಕೊಡುತ್ತಿದ್ದನು ಆದರೆ ದಿನಾಂಕ: 12.2.94 ರಂದು ವಾಹನವು ವಾಪಸ್ಸು ಬಂದಿರುವುದಿಲ್ಲ. ನಂತರ ಪರಿಶೀಲಿಸಿದಾಗ ವಾಹನವು ಅರಣ್ಯ ಅಪರಾಧ

ಪ್ರಕರಣದಲ್ಲಿ ಉಂಬಳೆಬೈಲು ವಲಯ ಅರಣ್ಯಾಧಿಕಾರಿ ವಶಪಡಿಸಿಕೊಂಡಿರುವುದು ತಿಳಿದು ಬಂದಿರುತ್ತದೆ. ಸದರಿ ವಾಹನದಿಂದಲೇ ಜೀವನ ನಿರ್ವಹಣೆ ಆಗುತ್ತಿದ್ದು ದಯಮಾಡಿ ವಾಹನ ಬಿಡುಗಡೆ ಮಾಡಬೇಕಾಗಿ ವಿನಂತಿಸಿರುತ್ತಾರೆ. ದಿನಾಂಕ: 20.12.1994 ರಂದು ಸಹಾಯಕ ಸರ್ಕಾರಿ ಅಭಿಯೋಜಕರು ಜೆ.ಎಂ.ಎಫ್.ಸಿ. ನ್ಯಾಯಾಲಯ ಭದ್ರಾವತಿ ಇವರು ಆಕ್ಷೇಪಣಾ ಪತ್ರ ಸಲ್ಲಿಸಿ ದಿನಾಂಕ: 12.2.94 ರಂದು ವಲಯ ಅರಣ್ಯಾಧಿಕಾರಿ ಉಂಬಳೆಬೈಲು ಹಾಗೂ ಸಿಬ್ಬಂದಿ ವರ್ಗದವರು ಅಕ್ರಮ ಅರಣ್ಯ ಉತ್ಪತ್ತಿ ಸಾಗಾಣಿಕೆ ಸಂಬಂಧ ಆಟೋರಿಕ್ಷಾ ಸಂಖ್ಯೆ: ಸಿಟಿಎಸ್-7089ನ್ನು ವಶಪಡಿಸಿಕೊಂಡು ಪ್ರಕರಣವನ್ನು ದಾಖಲು ಮಾಡಿರುತ್ತಾರೆ. ಈ ಬಗ್ಗೆ ಸ್ಥಳ ಮಹಜರ್ ಪ್ರಥಮ ಮಾಹಿತಿ ವರದಿ ಹಾಗೂ ಸೀಜರ್ ರಿಪೋರ್ಟ್‌ಗಳನ್ನು ದಾಖಲಿಸಿ ಹಾಜರುಪಡಿಸಿರುತ್ತಾರೆ. ಆದ್ದರಿಂದ ಅರ್ಜಿದಾರರ ಆಟೋರಿಕ್ಷಾದಲ್ಲಿ ಶ್ರೀಗಂಧದ ತುಂಡುಗಳು ಸಾಗಾಣಿಕೆಯಾಗಿರುವುದು ಮೇಲು ನೋಟಕ್ಕೆ ದೃಢಪಟ್ಟಿರುತ್ತದೆ. ಈ ಪ್ರಕರಣದಲ್ಲಿ ಅರ್ಜಿದಾರರು ಅರ್ಜಿಯನ್ನು ಸಲ್ಲಿಸಿದ್ದು ನಾನು ನಿರಪರಾಧಿ ಎಂದು ತಿಳಿಸಿರುತ್ತಾರೆ ಇದಕ್ಕೆ ಪೂರಕವಾದ ಯಾವುದೇ ದಾಖಲಾತಿಗಳು ಹಾಗೂ ಸಾಕ್ಷಿಗಳು ಲಭ್ಯವಾಗಿರುವುದಿಲ್ಲ. ಆದ್ದರಿಂದ ಈ ಪ್ರಕರಣದ ಬಗ್ಗೆ ಸಂಪೂರ್ಣ ವಿಚಾರಣೆ ಅಗತ್ಯವಿರುತ್ತದೆ. ಈ ಹಂತದಲ್ಲಿ ವಾಹನವನ್ನು ಬಿಡುಗಡೆ ಮಾಡದೇ ಅರ್ಜಿದಾರರ ಅರ್ಜಿಯನ್ನು ವಜಾ ಮಾಡಬೇಕಾಗಿ ವಿನಂತಿಸಿರುತ್ತಾರೆ.

ಮೇಲ್ಕಂಡ ಪ್ರಕರಣದ ಪೂರಾ ದಾಖಲಾತಿಗಳನ್ನು ಪರಿಶೀಲಿಸಿ ಈ ಪ್ರಕರಣದ ಬಗ್ಗೆ ಪೂರ್ಣ ವಿಚಾರಣೆ ಅಗತ್ಯವಾಗಿ ಬೇಕಾಗಿದೆ ಎಂದು ಭಾವಿಸಿ ಅರ್ಜಿದಾರರ ತಾತ್ಕಾಲಿಕ ವಾಹನ ಬಿಡುಗಡೆ ಕೋರಿಕೆಯ ಅರ್ಜಿಯನ್ನು ದಿನಾಂಕ: 21.1.95 ರಂದು ತಿರಸ್ಕರಿಸಿ ಆದೇಶ ಹೊರಡಿಸಿದೆ. ವಾಹನದ ಮಾಲೀಕರು ಈ ನ್ಯಾಯಾಲಯದ ಆದೇಶದ ವಿರುದ್ಧ ಮಾನ್ಯ ಜಿಲ್ಲಾ ಮತ್ತು ಸತ್ರ ನ್ಯಾಯಾಲಯದಲ್ಲಿ ಕ್ರಿಮಿನಲ್ ಮಿಸ್ ಅಪೀಲ್ ನಂ.16/95 ರಲ್ಲಿ ಮೇಲ್ಮನವಿ ಸಲ್ಲಿಸಿರುತ್ತಾರೆ. ಮಾನ್ಯ ನ್ಯಾಯಾಲಯವು ಈ ನ್ಯಾಯಾಲಯದ ಆದೇಶವನ್ನು ಬದಿಗೊತ್ತಿ ವಾಹನವನ್ನು 25000/-ಕ್ಕೆ ಇಂಡೆಮ್ನಿಟಿ ಬಾಂಡನ್ನು ಒಬ್ಬ ಶ್ಯೂರಿಟಿಯನ್ನು ದಾಖಲಾತಿಗಳೊಂದಿಗೆ ಪಡೆದು ಅರ್ಜಿದಾರರಿಗೆ ವಾಹನವನ್ನು ತಾತ್ಕಾಲಿಕ ಬಿಡುಗಡೆ ಮಾಡಲು ದಿನಾಂಕ: 13.7.95 ರಂದು ಆದೇಶ ಹೊರಡಿಸಿರುತ್ತದೆ. ವಾಹನದ ಮಾಲೀಕರು ನ್ಯಾಯಾಲಯದ ಆದೇಶದಂತೆ ಷರತ್ತುಗಳನ್ನು ಪೂರೈಸಿ ವಾಹನವನ್ನು ದಿನಾಂಕ: 11.8.95 ರಂದು ವಶಕ್ಕೆ ಪಡೆದಿರುತ್ತಾರೆ.

ಈ ಪ್ರಕರಣದ ಬಗ್ಗೆ ಅಂತಿಮ ಆದೇಶ ಹೊರಡಿಸಲು ದಿನಾಂಕ: 1.8.98 ರಿಂದ 12.1.2005 ರವರೆಗೆ ವಿವಿಧ ದಿನಾಂಕಗಳಂದು ವಿಚಾರಣೆ ನಡೆಸಿರುತ್ತದೆ. ಅಭಿಯೋಜನಾ ಪತಿಯಿಂದ ದಿನಾಂಕ: 22.9.99 ರಂದು ಶ್ರೀ ಹೆಚ್. ತಿಮ್ಮಪ್ಪ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಭದ್ರಾವತಿ ಉಪ ವಿಭಾಗ, ಪಿಡಬ್ಲ್ಯೂ-1 ಸಾಕ್ಷಿದಾರರಾಗಿ ಶ್ರೀ ಜಗನ್ನಾಥ ಅರಣ್ಯ ರಕ್ಷಕ, ಪಿಡಬ್ಲ್ಯೂ-2 ಸಾಕ್ಷಿದಾರರಾಗಿ ಹೇಳಿಕೆ ನೀಡಿರುತ್ತಾರೆ. ದಿನಾಂಕ: 8.1.2003 ರಂದು ಶ್ರೀ ಚಂದ್ರಶೇಖರ್ ಎಂ.ಆರ್. ವಾಹನದ ಮಾಲೀಕರು ಡಬ್ಲ್ಯೂ-1 ಸಾಕ್ಷಿದಾರರಾಗಿ ಪ್ರತಿವಾದಿಗಳ ಪರ ಹೇಳಿಕೆ ನೀಡಿರುತ್ತಾರೆ. ಪ್ರಾಧಿಕಾರಕ್ಕೆ ಹಾಜರುಪಡಿಸಿದ ದಾಖಲಾತಿಗಳನ್ನು ಪರಿಶೀಲಿಸಲಾಯಿತು ಹಾಗೂ ಅರ್ಜಿದಾರರ ಪರವಾಗಿ ನ್ಯಾಯವಾದಿಗಳು ಮಂಡಿಸಿದ ವಾದ ಹಾಗೂ ಫಿರ್ಯಾದಿದಾರರ ಪರ ಸಹಾಯಕ ಸರ್ಕಾರಿ ಅಭಿಯೋಜಕರು ಮಂಡಿಸಿದ ವಾದ ವಿವಾದವನ್ನು ಆಲಿಸಲಾಯಿತು.

ಈ ಪ್ರಕರಣದಲ್ಲಿ ವಾಸ್ತಾವಾಂಶ ಮತ್ತು ಕಾನೂನಿನ ವಸ್ತು ಸ್ಥಿತಿ ಹಾಗೂ ಲಭ್ಯವಿದ್ದ ವಿಷಯ ಸಾಮಗ್ರಿಗಳ ತಳ ಹದಿಯ ಮೇಲೆ ಗಮನಿಸಿ ಪರಿಗಣಿಸಬೇಕಾದ ಅಂಶಗಳು ಈ ಕೆಳಗಿನಂತಿವೆ.

1. ಅರ್ಜಿದಾರರ ಆಟೋರಿಕ್ಷಾ ನಂ. ಸಿ.ಟಿ.ಎಸ್. 7087 ರಲ್ಲಿ ಶ್ರೀಗಂಧದ ತುಂಡುಗಳು 28 (48 ಕೆ.ಜಿ.) ಸಂಖ್ಯೆಯನ್ನು ದಿನಾಂಕ: 12.2.1994 ರಂದು ಕಾನೂನಿನ ವಿರುದ್ಧವಾಗಿ ಸಾಗಿಸಲು ಉಪಯೋಗಿಸಲಾಗಿತ್ತು ಹಾಗೂ ಈ ರೀತಿ ಸಾಗಿಸುವ ಮುಖಾಂತರ ಅರಣ್ಯ ಅಪರಾಧವೆಸಗಿ ಕರ್ನಾಟಕ ಅರಣ್ಯ ಕಾಯಿದೆ ಮತ್ತು ನಿಯಮ ಉಲ್ಲಂಘಿಸಲಾಗಿದೆಯೇ?
2. ಕರ್ನಾಟಕ ಅರಣ್ಯ ವಿಧಿ 71(ಬಿ)ರ ಪ್ರಕಾರ ವಾಹನದ ಮಾಲೀಕರಿಗೆ ಕಾರಣ ಕೇಳಿ ನೋಟೀಸ್ ನೀಡಲಾಗಿದೆಯೇ ಹಾಗೂ ಮಾಲೀಕರಿಗೆ ಅವರ ಅಹವಾಲನ್ನು ಮಂಡಿಸಿ ಸಮರ್ಥಿಸಿಕೊಳ್ಳಲು ಸಾಕಷ್ಟು ಅವಕಾಶವನ್ನು ನೀಡಲಾಗಿದೆಯೇ
3. ಆಟೋರಿಕ್ಷಾ ಮಾಲೀಕರು ಅಥವಾ ಕೆಲಸಗಾರರು ಅಥವಾ ಅವರ ಪ್ರತಿನಿಧಿಗಳು ವಾಹನದಲ್ಲಿ ಅಕ್ರಮವಾಗಿ ಸರ್ಕಾರದ ಸ್ವತ್ತಾದ ಅರಣ್ಯ ಉತ್ಪನ್ನವನ್ನು ಸಾಗಿಸಲು ಶಾಮಿಲಾಗಿದ್ದಾರೆಯೇ ಹಾಗೂ ಈ ವಾಹನವನ್ನು ಇಂತಹ ಅಕ್ರಮ ಕಾನೂನು ಬಾಹಿರ ಅರಣ್ಯ ಉತ್ಪನ್ನ ಸಾಗಾಣಿಕೆಗೆ ಉಪಯೋಗಿಸದಂತೆ ವಾಹನದ ಮಾಲೀಕರು ಅದರ ಚಾಲಕರು ಅಥವಾ ಅವರ ಪ್ರತಿನಿಧಿಗಳು ಸಾಕಷ್ಟು ಸೂಕ್ತ ಮುನ್ನೆಚ್ಚರಿಕೆ ತೆಗೆದುಕೊಂಡಿರುತ್ತಾರೆಯೇ?
4. ಈ ಪ್ರಕರಣದಲ್ಲಿ ಫಿರ್ಯಾದಿದಾರರು ಅಮಾನತ್ತು ಪಡಿಸಿದ ಅರಣ್ಯ ಉತ್ಪನ್ನಗಳ ಮಾಲೀಕತ್ವ ಕರ್ನಾಟಕ ಕಾಯಿದೆಯಂತೆ ಸರ್ಕಾರಿ ಸ್ವತ್ತೆಂದು ಅಭಿಯೋಗವು ರುಜುವಾತುಪಡಿಸಿದೆಯೇ?
5. ಪ್ರಕರಣದಲ್ಲಿ ಅಮಾನತ್ತು ಪಡಿಸಿದ ವಾಹನ ಹಾಗೂ ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ?
6. ಏನು ತೀರ್ಮಾನಕ್ಕೆ ಬರಬಹುದಾಗಿದೆ?

ಈ ಮೇಲ್ಕಂಡ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸಿ ಈ ಕೆಳಗಿನಂತೆ ತೀರ್ಮಾನಕ್ಕೆ ಬರಲಾಗಿದೆ. ಅದಕ್ಕೆ ಕಾರಣಗಳನ್ನು ಈ ಕೆಳಗಿನಂತೆ ನೀಡಲಾಗಿದೆ.

1. ಒಂದನೇ ಅಂಶಕ್ಕೆ ಹೌದು ಎಂತಲೂ
2. ಎರಡನೇ ಅಂಶಕ್ಕೆ ಹೌದು ಎಂತಲೂ
3. ಮೂರನೇ ಅಂಶಕ್ಕೆ ಮೊದಲನೆ ಭಾಗದ ಪ್ರಶ್ನೆಗೆ ಹೌದು ಎಂದು ಎರಡನೇ ಭಾಗದ ಪ್ರಶ್ನೆಗೆ ಇಲ್ಲ ಎಂದಾಗಿರುತ್ತದೆ.
4. ನಾಲ್ಕನೆ ಅಂಶಕ್ಕೆ ಹೌದು ಎಂತಲೂ
5. ಐದನೇ ಅಂಶಕ್ಕೆ ಹೌದು ಎಂತಲೂ ಈ ಕೆಳಗಿನ ಕಾರಣಗಳಿಂದ ತೀರ್ಮಾನಕ್ಕೆ ಬರಲಾಗಿದೆ.

## ಕಾರಣಗಳು

**ಅಂಶ-1:**

ಈ ಪ್ರಕರಣದ ಫಿರ್ಯಾದಿದಾರರಾದ ವಲಯ ಅರಣ್ಯಾಧಿಕಾರಿಗಳು ಉಂಬಳೆಬೈಲು ಇವರು ಪ್ರಕರಣಕ್ಕೆ ಸಂಬಂಧಪಟ್ಟಂತೆ ಈ ಪ್ರಾಧಿಕಾರಕ್ಕೆ ಹಾಜರುಪಡಿಸಿದ ಸ್ಥಳ ಮಹಜರ್ (ಪ್ರಾ.ಸಾ.1) ಪ್ರಥಮ ವರ್ತಮಾನ ವರದಿ (ಪ್ರಾ.ಸಾ-2) ಹಾಗೂ ಸೀಜರ್ ರಿಪೋರ್ಟ್ (ಪ್ರಾ.ಸಾ-3) ವರದಿಗಳಿಂದ

ದಿನಾಂಕ: 12.2.94 ರಂದು ಬೆಳಿಗ್ಗೆ 10.00 ಗಂಟೆ ಸುಮಾರಿಗೆ ತೋಟದಕೆರೆ ಕಡೆಯಿಂದ ಶಿವಮೊಗ್ಗದ ಕಡೆಗೆ ಬರುತ್ತಿದ್ದ ಆಟೋರಿಕ್ಷಾ ಸಂಖ್ಯೆ: ಸಿಟಿಎಸ್ 7089ನ್ನು ನಿಲ್ಲಿಸಿ ಪರಿಶೀಲಿಸಿ ಸದರಿ ಆಟೋರಿಕ್ಷಾ ವಾಹನದಲ್ಲಿ ಶ್ರೀಗಂಧದ 28 ತುಂಡುಗಳನ್ನು ಪತ್ತೆ ಹಚ್ಚಿ ವಾಹನ ಚಾಲಕ ವಿಜಯ ಬಿನ್ ಪೂಜಾರಿ ರಾಜಪ್ಪನ ಸಮೇತ ವಶಪಡಿಸಿಕೊಂಡಿರುತ್ತಾರೆ. ನಂತರ ಅರಣ್ಯ ಮೊಕದ್ದಮೆ ಸಂಖ್ಯೆ: 160/93-94ನ್ನು ದಾಖಲು ಮಾಡಿ ಈ ನ್ಯಾಯಾಲಯದ ಸಮಕ್ಷಮ ವಾಹನ ಹಾಗೂ ಅರಣ್ಯ ಉತ್ಪನ್ನವನ್ನು ಹಾಜರುಪಡಿಸಿ ಅರಣ್ಯ ಕಾಯಿದೆ 71(ಎ) ಪ್ರಕಾರ ಕ್ರಮ ಜರುಗಿಸಲು ಕೋರಿರುತ್ತಾರೆ. ವಾಹನ ಹಾಗೂ ಅರಣ್ಯ ಉತ್ಪನ್ನವನ್ನು ವಲಯ ಅರಣ್ಯಾಧಿಕಾರಿ ಉಂಬಳೆಬೈಲುರವರ ವಶಕ್ಕೆ ಸುರಕ್ಷತೆಗೆ ನೀಡಿರುತ್ತದೆ. ವಾಹನದ ಮಾಲೀಕರು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿ ವಾಹನ ಬಿಡುಗಡೆ ಕೋರಿರುತ್ತಾರೆ. ಈ ನ್ಯಾಯಾಲಯವು ವಾಹನ ಬಿಡುಗಡೆ ಕೋರಿಕೆಯ ಅರ್ಜಿಯನ್ನು ತಿರಸ್ಕರಿಸಿರುತ್ತದೆ. ವಾಹನದ ಮಾಲೀಕರು ನ್ಯಾಯಾಲಯದಲ್ಲಿ ಮೇಲ್ಮನವಿ ಸಲ್ಲಿಸಿ ವಾಹನವನ್ನು ವಶಕ್ಕೆ ಪಡೆದಿರುತ್ತಾರೆ. ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ ಈ ಪ್ರಾಧಿಕಾರದಲ್ಲಿ ದಿನಾಂಕ: 22.9.99 ರಂದು ಶ್ರೀ ಹೆಚ್. ತಿಮ್ಮಪ್ಪ ವಲಯ ಅರಣ್ಯಾಧಿಕಾರಿ ಇವರು ಪಿಡಬ್ಲ್ಯೂ-1 ಹಾಗೂ ಶ್ರೀ ಜಗನ್ನಾಥ ಅರಣ್ಯ ರಕ್ಷಕ ಇವರು ಪಿಡಬ್ಲ್ಯೂ-2 ಸಾಕ್ಷಿದಾರರಾಗಿ ಹೇಳಿಕೆ ನೀಡಿರುತ್ತಾರೆ. ಅವರು ನೀಡಿದ ಹೇಳಿಕೆಯಂತೆ ದಿನಾಂಕ: 12.2.94 ರಂದು ಬೆಳಿಗ್ಗೆ ವರ್ತಮಾನದ ಮೇರೆಗೆ ಲಕ್ಕಿನಕೊಪ್ಪ ತನಿಖಾ ಠಾಣೆ ಹತ್ತಿರ ಕಾಯುತ್ತಿರುವಾಗ ಬೆಳಿಗ್ಗೆ 10.00 ಗಂಟೆಗೆ ಒಂದು ಆಟೋರಿಕ್ಷಾ ತೋಟದ ಕೆರೆ ಕಡೆಯಿಂದ ಶಿವಮೊಗ್ಗದ ಕಡೆಗೆ ಬರುತ್ತಿತ್ತು ಆಟೋರಿಕ್ಷಾ ತಡೆದು ನಿಲ್ಲಿಸಿ ಚೆಕ್ ಮಾಡಿದಾಗ ಹಿಂದಿನ ಸೀಟಿನ ಕೆಳಭಾಗದಲ್ಲಿ ಶ್ರೀಗಂಧದ ತುಂಡುಗಳು ಕಂಡುಬಂದಿತು. ಅವುಗಳನ್ನು ಹೊರಗೆ ತೆಗೆಸಿ ನೋಡಿದಾಗ ಅವುಗಳು ಒರಟು ಕೆತ್ತನೆ ಮಾಡಿದ್ದು ಅವುಗಳ ಮೇಲೆ ಯಾವುದೇ ಇಲಾಖಾ ಗುರುತು ಕಂಡು ಬಂದಿರುವುದಿಲ್ಲ. ಆಟೋರಿಕ್ಷಾ ಸಂಖ್ಯೆ: ಸಿ.ಟಿ.ಎಸ್. 7089 ಆಗಿರುತ್ತದೆ ವಾಹನದ ಚಾಲಕ ವಿಜಯ ಬಿನ್ ಪೂಜಾರಿ ರಾಜಪ್ಪ ನಗರ ವಾಸಿಯಾಗಿರುತ್ತಾನೆ. ಶ್ರೀಗಂಧದ ಕೆಲವು ತುಂಡುಗಳು ಹಸಿ ಹಾಗೂ ಕೆಲವು ಒಣಗಿರುತ್ತದೆ. ವಾಹನ ಚಾಲಕನು ನಾನೇ ಖುದ್ದಾಗಿ ವಾಹನದಲ್ಲಿ ಶ್ರೀಗಂಧವನ್ನು ಉಂಬಳೆಬೈಲು ಮನ್ನಾ ಜಂಗಲಿಯಿಂದ ಕಡಿದು ತಂದಿರುವುದಾಗಿ ತಿಳಿಸಿರುತ್ತಾನೆ. ಸದರಿ ತುಂಡುಗಳ ಸಾಗಾಣಿಕೆಯು ಅಕ್ರಮ ಎಂದು ಭಾವಿಸಿ ವಶಪಡಿಸಿಕೊಂಡು ಎಣಿಕೆ ಮಾಡಿ 1 ರಿಂದ 28ರ ವರೆಗೆ ಕೆಂಪು ಬಣ್ಣದಿಂದ ನಂ ಕೊಟ್ಟು ಅಳತೆ ಮಾಡಿ ಇಲಾಖಾ ಛಾಪಾ ಮುದ್ರಿಸಿ ಸ್ಥಳದಲ್ಲಿ ಮಹಜರ್ ಕ್ರಮ ಜರುಗಿಸಲಾಯಿತು. ಸದರಿ ಮಹಜರ್‌ನ್ನು ನಿಶಾನೆ ಡಿ1 ಎಂದು ಸಾಕ್ಷಿದಾರರ ಸಹಿಯನ್ನು ಕ್ರಮವಾಗಿ ಡಿ1ಎ ಮತ್ತು ಪಿಬಿ ಎಂದು ಗುರುತಿಸಲಾಯಿತು. ಪ್ರಕರಣ ದಾಖಲಿಸಿದ ಪ್ರಥಮ ವರ್ತಮಾನ ವರದಿಯನ್ನು ನಿಶಾನೆ ಡಿ2 ಹಾಗೂ ಸಾಕ್ಷಿದಾರರ ಸಹಿಯನ್ನು ಪಿ2ಎ ಎಂದು ಗುರುತಿಸಲಾಯಿತು ಪ್ರಕರಣದಲ್ಲಿ ವಶಪಡಿಸಿಕೊಂಡ ಮಾಲಿನ ಜಪ್ತಿ ವರದಿಯನ್ನು ನಿಶಾನೆ ಪಿ3 ಮತ್ತು ಸಾಕ್ಷಿದಾರರ ಸಹಿಯನ್ನು ಪಿ3ಎ ಎಂದು ಗುರುತಿಸಿರುತ್ತದೆ. ಪ್ರಕರಣದ ದಿನ ವಶಪಡಿಸಿಕೊಂಡ ಶ್ರೀಗಂಧದ ತುಂಡುಗಳನ್ನು ಹಾಗೂ ಆಟೋರಿಕ್ಷಾವನ್ನು ನೋಡಿದರೆ ಗುರುತಿಸುತ್ತೇನೆ ಎಂದು ಹೇಳಿಕೆ ನೀಡಿರುತ್ತಾರೆ.

ಅರ್ಜಿದಾರರ ಪರ ವಕೀಲರು ಮಾಡಿದ ಪಾಟೀ ಸವಾಲಿನಲ್ಲಿ ಅರಣ್ಯ ತನಿಖಾ ಠಾಣೆಯಲ್ಲಿ ಹಾದು ಹೋಗುವ ಇತರೆ ವಾಹನಗಳನ್ನು ತಪಾಸಣೆ ಮಾಡಿ ಕಳುಹಿಸಿರುತ್ತೇನೆ. ಆಟೋರಿಕ್ಷಾದಲ್ಲಿ ಕಟ್ಟಿಗೆ ಕತ್ತರಿಸಲು ಉಪಯೋಗಿಸಿದ ಸಾಧನಗಳು ಯಾವುದು ಸಿಗಲಿಲ್ಲ. ನಾವು ಶ್ರೀಗಂಧದ ಮರಗಳನ್ನು ಕಡಿದ ಜಾಗದಲ್ಲಿ ಹೋಗಿ ತಪಾಸಣೆ ಮಾಡಿದೆವು. ಆಟೋರಿಕ್ಷಾ ವಾಹನ ಚೆಕ್ ಮಾಡಲು ವಾಹನ ಚಾಲಕ ತಕರಾರು ಮಾಡಲಿಲ್ಲ. ಅರಣ್ಯ ತನಿಖಾ ಠಾಣೆಯಲ್ಲಿ ಯಾವುದೇ ಆಟೋರಿಕ್ಷಾ ಚೆಕ್ ಮಾಡಲಿಲ್ಲ ಹಾಗೂ ಯಾವುದೇ ತುಂಡುಗಳನ್ನು ವಶಪಡಿಸಿಕೊಂಡಿಲ್ಲ ಎನ್ನುವುದು ಸರಿಯಲ್ಲ. ಅಕ್ರಮ ಸಾಗಾಣಿಕೆಯಲ್ಲಿ ವಾಹನದ ಮಾಲೀಕರ ಪಾತ್ರ ಇದೆಯೇ ಇಲ್ಲವೇ ಹೇಳಲು ಬರುವುದಿಲ್ಲ ಎಂದು ಸಾಕ್ಷಿದಾರರು ಹೇಳಿರುತ್ತಾರೆ.

ಮೇಲ್ಕಂಡ ಸಾಕ್ಷಿದಾರರ ಹೇಳಿಕೆಗಳನ್ನು ಗಮನಿಸಿದಾಗ ಈ ಪ್ರಕರಣಕ್ಕೆ ಸಂಬಂಧಿಸಿದ ಆಟೋರಿಕ್ಷಾ ವಾಹನದಲ್ಲಿ ಶ್ರೀಗಂಧದ ತುಂಡುಗಳು ಸಾಗಾಣಿಕೆ ಆಗಿರುವುದು ದೃಢಪಟ್ಟಿರುತ್ತದೆ. ಸಾಕ್ಷಿದಾರರು ನೀಡಿದ ಹೇಳಿಕೆಗಳು ಹಾಗೂ ಸ್ಥಳ ಪಂಚನಾಮೆಯಲ್ಲಿರುವ ಅಂಶಗಳು ಒಂದಕ್ಕೊಂದು ತಾಳೆ ಹೊಂದಿದ್ದು ಯಾವುದೇ ವ್ಯತಿರಿಕ್ತ ಹೇಳಿಕೆಗಳು ಬಂದಿರುವುದಿಲ್ಲ. ಅವರುಗಳು ನುಡಿದ ಸಾಕ್ಷ್ಯಿಯು ನಂಬುವಂತಾಗಿರುತ್ತದೆ. ಅಲ್ಲದೇ ಪಾಟೀ ಸವಾಲಿನಲ್ಲಿಯೂ ಸಹ ಅರ್ಜಿದಾರರ ಪರ ವಕೀಲರು ಕೇಳಿದ ಪ್ರಶ್ನೆಗೆ ಸೂಕ್ತವಾದ ಉತ್ತರವನ್ನು ನೀಡಿರುತ್ತಾರೆ ಹಾಗೂ ವಾಹನದ ಮಾಲೀಕರ ವಾಹನದಲ್ಲಿ ಅಕ್ರಮವಾಗಿ ಶ್ರೀಗಂಧದ ತುಂಡುಗಳು ಸಾಗಾಣಿಕೆಗೆ ಬಳಸಿರುವುದು ದೃಢಪಟ್ಟಿರುತ್ತದೆ ಹಾಗೂ 1963ನೇ ಕರ್ನಾಟಕ ಅರಣ್ಯ ವಿಧಿ 24(ಇ) 62, 84, 85, 86, 87, 71(ಎ) ಮತ್ತು ರೂಲ್ 144 ಮತ್ತು 145 ಕೆಎಫ್‌ಆರ್ 1969ರ ನಿಯಮವನ್ನು ಉಲ್ಲಂಘಿಸಲಾಗಿರುತ್ತದೆ. ಈ ಮೇಲ್ಕಂಡ ಕಾರಣಗಳಿಂದ ಒಂದನೇ ಅಂಶಕ್ಕೆ ನನ್ನ ಉತ್ತರ ಹೌದು ಎಂಬುದಾಗಿದೆ.

**ಅಂಶ-2:**

ಈ ಪ್ರಕರಣದಲ್ಲಿ ಅಮಾನತ್ತುಪಡಿಸಿದ ಆಟೋರಿಕ್ಷಾ ಸಿಟಿಎಸ್ 7089ರ ವಾಹನದ ಮಾಲೀಕರು ಶ್ರೀ ಚಂದ್ರಶೇಖರ್ ಎಂ.ಆರ್. ಬಿನ್ ರಾಮಣ್ಣ, ಶಿವಮೊಗ್ಗ ಇವರು ದಿನಾಂಕ: 25.2.1994 ರಂದು ಈ ಪ್ರಾಧಿಕಾರದಲ್ಲಿ ವಾಹನವನ್ನು ಮಧ್ಯಂತರ ಸ್ವಾಧೀನಕ್ಕೆ ಬಿಡುಗಡೆ ಮಾಡಲು ಕೋರಿ ಅರ್ಜಿ ಸಲ್ಲಿಸಿದ್ದು ದಿನಾಂಕ: 28.3.94 ರಂದು ವಾಹನದ ಮಾಲೀಕರಿಗೆ ಅರಣ್ಯ ಕಾಯಿದೆ 71(ಬಿ) ಪ್ರಕಾರ ಕಾರಣ ಕೇಳಿ ತಿಳುವಳಿಕೆ ಪತ್ರ ನೀಡಿರುತ್ತದೆ ಮತ್ತು ದಿನಾಂಕ: 30.3.94 ರಂದು ಅರ್ಜಿದಾರರು ಸಮಜಾಯಿಷಿ ನೀಡಿರುತ್ತಾರೆ ತದ ನಂತರ ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ ಈ ಪ್ರಾಧಿಕಾರದಲ್ಲಿ ನಡೆದ ವಿಚಾರಣೆ ಅರ್ಜಿದಾರರು ಹಾಗೂ ನ್ಯಾಯವಾದಿಗಳು ಹಾಜರಾಗಿರುತ್ತಾರೆ ಹೇಳಿಕೆ ನೀಡಿರುತ್ತಾರೆ. ದಾಖಲಾತಿಗಳನ್ನು ಗುರುತಿಸಿಕೊಂಡಿರುತ್ತಾರೆ. ಆದ್ದರಿಂದ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಬಿ) ಪ್ರಕಾರ ಆರ್.ಸಿ. ಮಾಲೀಕರಿಗೆ ಅವಕಾಶ ನೀಡಿರುವುದಾಗಿ ತೀರ್ಮಾನಿಸಿರುತ್ತೇನೆ. ಆದ ಕಾರಣ ಅಂಶ-2ಕ್ಕೆ ನನ್ನ ಉತ್ತರ ಹೌದು ಎಂಬುದಾಗಿದೆ.

**ಅಂಶ-3:**

ವಾಹನದ ಆರ್.ಸಿ. ಮಾಲೀಕರಾದ ಶ್ರೀ ಎಂ.ಆರ್. ಚಂದ್ರಶೇಖರ್ ಬಿನ್ ರಾಮಣ್ಣ, ಶಿವಮೊಗ್ಗ ಇವರು ದಿನಾಂಕ: 25.2.94 ರಂದು ಈ ಪ್ರಕರಣದಲ್ಲಿ ಅರ್ಜಿ ಸಲ್ಲಿಸಿ ಪ್ರಕರಣದಲ್ಲಿ ಅಮಾನತ್ತುಪಡಿಸಿದ ನೋಂದಾವಣೆ ಸಂಖ್ಯೆ: ಸಿಟಿಎಸ್ 7089ರ ಆಟೋರಿಕ್ಷಾ ವಾಹನವನ್ನು ಮಧ್ಯಂತರ ಸ್ವಾಧೀನಕ್ಕೆ ಬಿಡುಗಡೆ ಮಾಡಬೇಕೆಂದು ಕೋರಿರುತ್ತಾರೆ. ಅವರ ಅರ್ಜಿಯನ್ನು ತಿರಸ್ಕರಿಸಿ ಪೂರ್ಣ ವಿಚಾರಣೆ ಅಗತ್ಯವಿದೆಯೆಂದು ಈ ನ್ಯಾಯಾಲಯವು 21.1.95 ರಂದು ಆದೇಶ ಹೊರಡಿಸಿರುತ್ತದೆ. ಮುಂದುವರೆದು ವಾಹನದ ಮಾಲೀಕರು ಶಿವಮೊಗ್ಗ ಸೆಷನ್ ನ್ಯಾಯಾಲಯದಲ್ಲಿ ಮೇಲ್ಮನವಿ ಸಲ್ಲಿಸಿರುತ್ತಾರೆ. ಮಾನ್ಯ ನ್ಯಾಯಾಲಯವು ವಾಹನವನ್ನು ರೂ.25000/- ಗಳ ಇಂಡೆಮ್ನಿಟಿ ಬಾಂಡ್ ಮತ್ತು ಶ್ಯೂರಿಟಿ ಬಾಂಡನ್ನು ಪಡೆದು ತಾತ್ಕಾಲಿಕ ಬಿಡುಗಡೆಗೊಳಿಸಲು ಆದೇಶಿಸಿರುತ್ತದೆ. ವಾಹನದ ಮಾಲೀಕರು ವಾಹನವನ್ನು ನ್ಯಾಯಾಲಯದ ಷರತ್ತುಗಳನ್ನು ಪೂರೈಸಿ ವಶಕ್ಕೆ ಪಡೆದಿರುತ್ತಾರೆ. ಈ ಪ್ರಕರಣದಲ್ಲಿ ವಿವಿಧ ದಿನಾಂಕಗಳಂದು ಈ ನ್ಯಾಯಾಲಯದಲ್ಲಿ ಅಂತಿಮ ಆದೇಶ ಹೊರಡಿಸಲು ವಿಚಾರಣೆ ನಡೆಸಿರುತ್ತದೆ. ಅರ್ಜಿದಾರರು ದಿನಾಂಕ: 8.1.2003 ರಂದು ನ್ಯಾಯಾಲಯಕ್ಕೆ ಹಾಜರಾಗಿ ಹೇಳಿಕೆ ನೀಡಿರುತ್ತಾರೆ. ಅವರ ಹೇಳಿಕೆ ಪ್ರಕಾರ ಆಟೋರಿಕ್ಷಾ ನೋಂದಣಿ ಸಂಖ್ಯೆ: ಸಿ.ಟಿ.ಎಸ್. 7089ರ

ಮಾಲೀಕನಾಗಿರುತ್ತೇನೆ. ವಾಹನಕ್ಕೆ ಸಂಬಂಧಿಸಿದಂತೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ನೀಡಿದ 'ಬಿ' ಎಕ್ಸ್‌ಟ್ರಾಕ್ಟ್‌ನ್ನು ಹಾಜರುಪಡಿಸಿರುತ್ತಾರೆ. ಅದನ್ನು ನಿಶಾನೆ-ಡಿ1 ಎಂದು ಗುರುತಿಸಲಾಗಿದೆ. ವಾಹನಕ್ಕೆ ಸಂಬಂಧಿಸಿದ ಆರ್.ಸಿ. ಪುಸ್ತಕ ಹಾಜರುಪಡಿಸಿದ್ದು ಅದನ್ನು ನಿಶಾನೆ-ಡಿ2 ಎಂದು ಗುರುತಿಸಿರುತ್ತದೆ. ನನ್ನ ವಾಹನವನ್ನು ವಿಜಯಕುಮಾರ್ ಎನ್ನುವವರಿಗೆ ದಿನಬಾಡಿಗೆ ಎನ್ನುವ ಲೆಕ್ಕಚಾರದಲ್ಲಿ ವಹಿಸಿಕೊಟ್ಟಿದೆ ಅದನ್ನು ಬೆಳಿಗ್ಗೆ 8 ಗಂಟೆಯಿಂದ ರಾತ್ರಿ 8 ಗಂಟೆಯವರೆಗೆ ಓಡಿಸಿ ನಂತರ ವಾಪಸ್ಸು ಮನೆಗೆ ತಂದು ಕೊಡುತ್ತಿದ್ದನು. ದಿನಾಂಕ: 12.2.94 ರಂದು ವಿಜಯಕುಮಾರ್ ಆಟೋರಿಕ್ಷಾ ವಾಹನವನ್ನು ಮನೆಗೆ ತಂದು ಹಾಜರು ಪಡಿಸಲಿಲ್ಲ. ನನಗೆ ಪರಿಚಿತರು ಆಟೋರಿಕ್ಷಾ ಉಂಬಳೆಬೈಲು ವಲಯ ಅರಣ್ಯಾಧಿಕಾರಿ ಅಮಾನತ್ತುಪಡಿಸಿರುತ್ತಾರೆ ಎಂದು ತಿಳಿಸಿದರು. ವಾಹನ ಚಾಲಕ ಶ್ರೀಗಂಧವನ್ನು ವಾಹನದಲ್ಲಿ ಸಾಗಾಣಿಕೆ ಮಾಡಿದ ವಿಚಾರ ತಿಳಿಯಿತು. ಈ ಸಾಗಾಣಿಕೆಗೂ ನನಗೂ ಯಾವುದೇ ಸಂಬಂಧವಿಲ್ಲ. ಆದ್ದರಿಂದ ವಾಹನವನ್ನು ಬಿಡುಗಡೆಮಾಡಬೇಕೆಂದು ನ್ಯಾಯಾಲಯವನ್ನು ಕೋರಿರುತ್ತಾರೆ.

ಅಭಿಯೋಜನಾ ವತಿಯಿಂದ ಸಹಾಯಕ ಸರ್ಕಾರಿ ಅಭಿಯೋಜಕರು ಮಾಡಿದ ಪಾಟೀ ಸವಾಲಿನಲ್ಲಿ ಅರ್ಜಿದಾರರು ಹೇಳಿಕೆ ನೀಡಿ ಘಟನೆ ನಡೆಯುವುದಕ್ಕೆ 2 ತಿಂಗಳ ಹಿಂದೆ ವಾಹನವನ್ನು ಬಾಡಿಗೆ ಓಡಿಸಲು ವಿಜಯಕುಮಾರ್ ರವರಿಗೆ ಕೊಟ್ಟಿದ್ದೆ. ವಿಜಯಕುಮಾರ್ ಒಳ್ಳೆ ಹುಡುಗನೆಂದು ಬಾಡಿಗೆ ಓಡಿಸಲು ಕೊಟ್ಟಿದ್ದೆ. ಆಟೋರಿಕ್ಷಾ ದುರ್ಬಳಕೆಯಾಗದಂತೆ ತಡೆಯಲು ಯಾವುದೇ ಮುನ್ನೆಚ್ಚರಿಕೆ ಕ್ರಮ ತೆಗೆದುಕೊಳ್ಳಲಿಲ್ಲ ಎಂದರೆ ಸರಿಯಲ್ಲ. ನಾನು ಬಾಯಿ ಮಾತಿನ ಮೂಲಕ ವ್ಯವಹಾರ ಮಾಡಿಕೊಂಡಿದ್ದೆವು. ವಿಜಯಕುಮಾರ್ ಶ್ರೀಗಂಧದ ಕಳ್ಳಸಾಗಾಣಿಕೆ ಮಾಡುತ್ತಿದ್ದ ಎಂದರೆ ಸರಿಯಲ್ಲ. ಬೇಜವಾಬ್ದಾರಿತನದಿಂದ ವಾಹನದಲ್ಲಿ ಕಳ್ಳ ಸಾಗಾಣಿಕೆಯಾಗಿದೆ ಅನ್ನುವುದು ಸರಿಯಲ್ಲ ಎಂದು ಪಾಟೀ ಸವಾಲಿಗೆ ಉತ್ತರ ನೀಡಿರುತ್ತಾರೆ.

ಮೇಲ್ಕಂಡ ಅರ್ಜಿದಾರರ ಅರ್ಜಿ ನ್ಯಾಯಾಲಯದಲ್ಲಿ ನೀಡಿದ ಹೇಳಿಕೆಗಳು ಮತ್ತು ಅರ್ಜಿದಾರರು ನ್ಯಾಯಾಲಯಕ್ಕೆ ನೀಡಿದ ದಾಖಲಾತಿಗಳನ್ನು ಪರಿಶೀಲಿಸಿದಾಗ ಈ ಕೆಳಕಂಡ ಅಂಶಗಳು ಕಂಡುಬಂದಿರುತ್ತದೆ.

1. ವಾಹನದ ಮಾಲೀಕರಾದ ಶ್ರೀ ಚಂದ್ರಶೇಖರ್ ಎಂ.ಆರ್. ಇವರು ನಾನು ನಿರಪರಾಧಿ ಎಂದು ತಿಳಿಸಿದ್ದು ಈ ಬಗ್ಗೆ ಯಾವುದೇ ಅಧಿಕೃತ ಸಾಕ್ಷ್ಯಾಧಾರಗಳನ್ನು ಹಾಜರುಪಡಿಸಿರುವುದಿಲ್ಲ.
2. ವಾಹನವನ್ನು ವಿಜಯಕುಮಾರ್ ಎಂಬ ಚಾಲಕನಿಗೆ ಪ್ರತಿನಿತ್ಯ ಓಡಿಸಲು ನೀಡಿದ್ದು ಅವರು ಬಾಡಿಗೆ ರೂಪದಲ್ಲಿ ರೂ.35/- ನ್ನು ಪ್ರತಿ ದಿನ ನೀಡುತ್ತಿದ್ದ ಎಂದು ತಿಳಿಸಿರುತ್ತಾರೆ. ಆದರೆ ಈ ಬಗ್ಗೆ ಯಾವುದೇ ಅಧಿಕೃತ ಕರಾರು ಪತ್ರವನ್ನು ಹಾಜರುಪಡಿಸಿರುವುದಿಲ್ಲ.
3. ವಾಹನ ಚಾಲಕ ವಿಜಯಕುಮಾರ್ ಈ ಪ್ರಕರಣದಲ್ಲಿ ಅಪರಾಧಿಯಾಗಿದ್ದು ವಾಹನ ಮಾಲೀಕರು ಆತನ ಮೇಲೆ ಯಾವುದೇ ಪೊಲೀಸ್ ಕಂಪ್ಲೆಂಟ್ ನೀಡಿರುವುದಿಲ್ಲ.
4. ವಾಹನ ಚಾಲಕ ಸಭ್ಯವ್ಯಕ್ತಿ ಎಂದು ತಿಳಿಸಿದ್ದು ಆತನನ್ನು ಸಾಕ್ಷಿಯಾಗಿ ಈ ನ್ಯಾಯಾಲಯಕ್ಕೆ ಹಾಜರುಪಡಿಸಿ ಘಟನೆಯ ಸತ್ಯಾಂಶವನ್ನು ತಿಳಿಸಬಹುದಾಗಿರುತ್ತದೆ.
5. ವಾಹನವು ನಗರದ 10 ಕಿ.ಮೀ. ವ್ಯಾಪ್ತಿಗೆ ಸೀಮಿತವಾಗಿದ್ದು, ಆದರೆ ಅದು ಉಂಬಳೆಬೈಲು ಮನ್ನಾ ಜಂಗಲಿಯಿಂದ ಶ್ರೀಗಂಧ ಸಾಗಿಸುವ ಪ್ರಕರಣದಲ್ಲಿ ಸಿಲುಕಿರುವುದು ವಾಹನದ ಮಾಲೀಕರ ಬೇಜವಾಬ್ದಾರಿಯಿಂದ ಎಂದು ಕಂಡು ಬರುತ್ತದೆ.
6. ವಾಹನವನ್ನು ಬಾಡಿಗೆ ಉದ್ದೇಶದಿಂದ ಬಳಸುತ್ತಿರುವುದನ್ನು ಸಂಬಂಧಿಸಿದ ಪ್ರಾದೇಶಿಕ ಸಾರಿಗೆ ಅಧಿಕಾರಿಗಳ ಕಛೇರಿಗೆ ತಿಳಿಸಿ ಒಪ್ಪಿಗೆ ಪಡೆದ ಯಾವುದೇ ಪತ್ರವನ್ನು ನ್ಯಾಯಾಲಯಕ್ಕೆ ಹಾಜರುಪಡಿಸಿರುವುದಿಲ್ಲ.
7. ವಾಹನವನ್ನು ಬಾಡಿಗೆ ನೀಡಿದ ಚಾಲಕರಿಗೆ ಆಟೋರಿಕ್ಷಾ ಓಡಿಸುವ ಪರವಾನಿಗೆ ಇತ್ತು ಎಂದು ತಿಳಿಸಿದ್ದು ಈ ಬಗ್ಗೆ ಸಹ ಅಧಿಕೃತ ದಾಖಲಾತಿಯನ್ನು ಹಾಜರುಪಡಿಸಿರುವುದಿಲ್ಲ.

ಈ ಮೇಲ್ಕಂಡ ಎಲ್ಲಾ ಅಂಶಗಳನ್ನು ಪರಿಶೀಲಿಸಿ ಮತ್ತು ಅರ್ಜಿದಾರರ ಪರ ವಕೀಲರ ವಾದವನ್ನು ಆಲಿಸಿದಾಗ ವಾಹನದ ಮಾಲೀಕರು ಅಥವಾ ಅವರ ಪ್ರತಿನಿಧಿಗೆ ಅಥವಾ ಅವರ ಚಾರ್ಜ್ ಪಡೆದವರಿಗೆ (ಚಾಲಕರಿಗೆ) ತಿಳುವಳಿಕೆಗೆ ಬಾರದೆ ಮತ್ತು ಶಾಮೀಲಾಗಿರದೇ ಅಪರಾಧವಾಗಿದೆ ಎಂಬುದನ್ನು ಡಿಫೆನ್ಸ್ ರವರು ರುಜುವಾತುಪಡಿಸಿರುವುದಿಲ್ಲ. ವಾಹನದ ಎಲ್ಲಾ ರೀತಿಯ ಮುಂಜಾಗ್ರತೆ ಕ್ರಮ ತೆಗೆದುಕೊಂಡಿದ್ದರೆ ಈ ಕೃತ್ಯ ನಡೆಯುತ್ತಿರಲಿಲ್ಲ. ಅರ್ಜಿದಾರರು ವಾಹನ ಬಿಡುಗಡೆ ಕೋರಿ ಸಲ್ಲಿಸಿದ ಅರ್ಜಿಯಲ್ಲಿರುವ ವಿಷಯ ಮತ್ತು ನ್ಯಾಯಾಲಯದಲ್ಲಿ ನೀಡಿದ ಹೇಳಿಕೆಗಳು ಒಂದು ಕಟ್ಟು ಕತೆ ನಂಬಲು ಅಸಾಧ್ಯವಾಗಿರುತ್ತದೆ.

ಅರ್ಜಿದಾರರ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಸಾಗಾಣಿಕೆಗೆ ಬಳಕೆಯಾಗದಂತೆ ವಾಹನದ ಮಾಲೀಕರು ಅಥವಾ ಅವರ ಪ್ರತಿನಿಧಿಗಳು ಯಾವುದೇ ಮುನ್ನೆಚ್ಚರಿಕೆ ವಹಿಸಿದ ಬಗ್ಗೆ ಸಮರ್ಪಕವಾದ ಸಾಕ್ಷಿಗಳನ್ನು ನೀಡಿರುವುದಿಲ್ಲ. ವಾಹನದಲ್ಲಿ ನನ್ನ ಗಮನಕ್ಕೆ ಬಾರದಂತೆ ಈ ಕೃತ್ಯ ನಡೆದಿದೆ ಎಂಬುದನ್ನು ಕರ್ನಾಟಕ ಅರಣ್ಯ ಕಾಯಿದೆ ಕಲಂ 71(ಬಿ) (2) ರೀತ್ಯ ಸಾಬೀತುಪಡಿಸುವ ಜವಾಬ್ದಾರಿ ವಾಹನದ ಮಾಲೀಕರಿಗೆ ಸೇರಿದ್ದಾಗಿರುತ್ತದೆ ಅಲ್ಲದೇ ವಾಹನದ ಮಾಲೀಕರ ಏಜೆಂಟರಾಗಲೀ ಚಾಲಕರಾಗಲೀ ಅಥವಾ ನಂಬಿಕೆ ಪ್ರತಿನಿಧಿಗಳು ವಾಹನದಲ್ಲಿ ಅಕ್ರಮ ಸಾಗಾಣಿಕೆಯಾಗದಂತೆ ಮುನ್ನೆಚ್ಚರಿಕೆ ವಹಿಸುವುದು ಸಹ ಇವರುಗಳ ಜವಾಬ್ದಾರಿಯಾಗಿರುತ್ತದೆ.

"Without prejudice to the provisions of sub-section (1), no order confiscating any tool, rope, chain, boat, vehicle or cattle shall be made under section 71A if the owner of the tool, rope, chain, boat, vehicle or cattle proves to the satisfaction of the authorised officer that it was used in carrying the timber, sandalwood, charcoal, firewood or ivory without the knowledge or connivance of the owner himself, his agent, if any, and the person in charge of the tool, rope, chain, boat, vehicle or cattle and that each of them had taken all reasonable and necessary precautions against such use."

ಆಟೋರಿಕ್ಷಾ ನೋಂದಾವಣಿ ಸಂಖ್ಯೆ ಸಿ.ಟಿ.ಎಸ್ 7089ರ ವಾಹನದಲ್ಲಿ ಅರಣ್ಯ ಉತ್ಪನ್ನವು ಕಾನೂನು ಬಾಹಿರವಾಗಿ ಸಾಗಿಸದಂತೆ ಸೂಕ್ತ ಮುನ್ನೆಚ್ಚರಿಕೆ ತೆಗೆದುಕೊಂಡಿದ್ದೇವೆ ಎಂಬುದನ್ನು ಸಾಕ್ಷಿ ಪುರಾವೆಗಳ ಸಹಿತ ಈ ಪ್ರಕರಣದಲ್ಲಿ ಸಾಬೀತುಪಡಿಸಲು ವಾಹನದ ಮಾಲೀಕರು ಹಾಗೂ ಅವರ ಪರ ವಕೀಲರು ಸಂಪೂರ್ಣ ವಿಫಲಗೊಂಡಿರುತ್ತಾದ್ದರಿಂದ ಪ್ರಕರಣದ ವಾಹನವನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆ ಹಾಲಿ ಪ್ರಕರಣಕ್ಕೆ ಕೇರಳ ರಾಜ್ಯ ಉಚ್ಚ ನ್ಯಾಯಾಲಯದ ತೀರ್ಮಾನ ಕ್ರೈಮ್ಸ್ 2000 (3) ಪುಟ 563 ಅತ್ಯಂತ ಸರಿ ಹೊಂದುವಂತಹ ತೀರ್ಮಾನವಾಗಿರುತ್ತದೆ. ಅದರ ಉದ್ಧೃತ ಭಾಗ ಈ ಕೆಳಕಂಡಂತಿದೆ.

"The contention that such a strict view would adversely affect an innocent vehicle owner cannot be countenanced since any narrow or liberal interpretation of confiscatory provisions in the Act can eventually lead to disastrous consequences for forest wealth which is a very endangered bounty of nature. The idea behind extension of confiscatory provisions to vehicles etc., is to convey a pre-emptory and explicit message to the vehicle owners not to allow their vehicles to be used for depletion of forest wealth. If any vehicle is caught in the nefarious act of carrying illicit forest produce it is not enough that the owner establishes his innocence alone. If he wants to retrieve his vehicle he must show further that the person who was in-charge of the vehicle has taken reasonable and necessary precautionary measures against such user of the vehicle. The owner cannot rest with establishing his innocence in the matter. It may be that having succeeded in showing his innocence his failure to establish the next limb might lead to hard consequences to him. Legislature intended, by providing such stringent conditions, to prevent harder consequences for the society and for the posterity."

ಮೇಲ್ಕಂಡ ವಿದ್ಯಾಮಾನಗಳನ್ನು ಅವಲೋಕಿಸಿ ನೋಡಿದಾಗ ಅರ್ಜಿದಾರರ ತಿಳುವಳಿಕೆಗೆ ಬಂದು ಈ ಕೃತ್ಯ ನಡೆದಿದೆ ಹಾಗೂ ಅರ್ಜಿದಾರರು ಅಥವಾ ಅವರು ನೇಮಿಸಿದಂತಹ ವ್ಯಕ್ತಿಗಳು ಸಹ ಮೇಲ್ಕಂಡ ಅರಣ್ಯ ಉತ್ಪನ್ನ ಕಳ್ಳ ಸಾಗಾಣಿಕೆಯಲ್ಲಿ ಭಾಗವಹಿಸಿರುತ್ತಾರೆ ಎಂಬುದಕ್ಕೆ ಯಾವುದೇ ಸಂಶಯವಿರುವುದಿಲ್ಲ ಹಾಗೂ ಈ ವಾಹನವನ್ನು ಅಕ್ರಮ ಕಾನೂನು ಬಾಹಿರ ಅರಣ್ಯ ಉತ್ಪನ್ನ ಸಾಗಾಣಿಕೆಗೆ ಉಪಯೋಗಿಸದಂತೆ ವಾಹನದ ಮಾಲೀಕರು ಚಾಲಕರು ಅಥವಾ ಅವರ ಪ್ರತಿನಿಧಿಗಳು ಸಾಕಷ್ಟು ಸೂಕ್ತ ಮುನ್ನೆಚ್ಚರಿಕೆ ತೆಗೆದುಕೊಂಡಿರುವುದಿಲ್ಲ. ಆಟೋರಿಕ್ಷಾ ವಾಹನದಲ್ಲಿ ಶ್ರೀಗಂಧದ ತುಂಡುಗಳು ಅಕ್ರಮ ಸಾಗಾಣಿಕೆಯು ವಾಹನದ ಮಾಲೀಕರಿಗೆ ಗೊತ್ತಿದ್ದೇ. ಈ ಕೃತ್ಯ ನಡೆದಿದೆಯೆಂದು ಅಭಿಪ್ರಾಯ ಪಡುತ್ತೇನೆ. ಮೇಲಿನ ಎಲ್ಲಾ ಕಾರಣಗಳಿಂದ 3ನೇ ಅಂಶದ ಮೊದಲಿನ ಭಾಗದ ಪ್ರಶ್ನೆಗೆ ನನ್ನ ಉತ್ತರ ಹೌದು ಎರಡನೇ ಭಾಗದ ಪ್ರಶ್ನೆಗೆ ನನ್ನ ಉತ್ತರ ಇಲ್ಲವೆಂದು ಅಭಿಪ್ರಾಯ ಪಡುತ್ತೇನೆ.

**ಅಂಶ-4:**

ದಿನಾಂಕ: 12.2.94 ರಂದು ಆಟೋರಿಕ್ಷಾ ನಂ. ಸಿಟಿಎಸ್-7089 ರಲ್ಲಿ ಅಕ್ರಮವಾಗಿ ಶ್ರೀಗಂಧದ ತುಂಡುಗಳು 28=48 ಕೆಜಿಯನ್ನು ಸಾಗಾಣಿಕೆ ಮಾಡುತ್ತಿರುವುದನ್ನು ವಲಯ ಅರಣ್ಯಾಧಿಕಾರಿ ಉಂಬಳೆಬೈಲು ವಲಯ ಹಾಗೂ ಸಿಬ್ಬಂದಿಯವರು ಸರ್ಕಾರದ ಪರ ಅಮಾನತ್ತುಪಡಿಸಿರುವುದು ಈ ನ್ಯಾಯಾಲಯಕ್ಕೆ ಹಾಜರುಪಡಿಸಿದ ದಾಖಲಾತಿಗಳಿಂದ ದೃಢಪಟ್ಟಿರುತ್ತದೆ.

ಕರ್ನಾಟಕ ಅರಣ್ಯ ಕಾಯಿದೆ ಕಲಂ 80ರ ಪ್ರಕಾರ ಯಾವುದೇ ಅರಣ್ಯ ಪ್ರಕರಣದಲ್ಲಿ ವಶಪಡಿಸಿಕೊಂಡ ಅರಣ್ಯ ಉತ್ಪನ್ನವು ಪ್ರಾಥಮಿಕ ಹಂತದಲ್ಲಿ ಸರ್ಕಾರದ್ದೆಂದೇ ಭಾವಿಸಬೇಕಾಗಿದ್ದು ಆಪಾದನೆ ಹೊರಡಿಸಲ್ಪಟ್ಟ ವ್ಯಕ್ತಿ ಅಮಾನತ್ತುಪಡಿಸಿಕೊಂಡ ಮರವು ತನಗೆ ಸೇರಿದೆ ಎಂಬುದನ್ನು ಪುರಾವೆ ಮಾಡುವ ಹೊಣೆಯನ್ನು ಹೊರಬೇಕಾಗಿರುತ್ತದೆ.

"When in any proceedings taken under this Act or in consequence of anything done under this Act or under any other law for the time being in force, a question arises as to whether any forest produce is the property of the State Government, such produce shall be presumed to be the property of the State Government until the contrary is proved, and in case of any prosecution the burden of proving the contrary shall lie on the accused."

ಕಲಂ 80, 84 ಕರ್ನಾಟಕ ಕಾಯಿದೆ 1963ರ ಪ್ರಕಾರ ಶ್ರೀಗಂಧವನ್ನು ಎಲ್ಲಿ ಬೆಳೆದರೂ ರಾಜ್ಯ ಸರ್ಕಾರದ ಸ್ವತ್ತಾಗಿರುತ್ತದೆ. ಸೆಕ್ಷನ್ 50 ಕರ್ನಾಟಕ ಕಾಯಿದೆ 1963 ಕರ್ನಾಟಕ ಅರಣ್ಯ ನಿಯಮಗಳು 1969 ನಿಯಮ 154 ಮತ್ತು 155ಗಳನ್ನು ಪರಿಸಿದೆ. ಶ್ರೀಗಂಧದ ಕಳ್ಳಸಾಗಾಣಿಕೆಯ ಪ್ರಕರಣ ದಾಖಲಾದ ಬಳಿಕ ಅಂತಹ ಪ್ರಕರಣದಲ್ಲಿ ಅಮಾನತ್ತುಪಡಿಸಿರುವ ಶ್ರೀಗಂಧವನ್ನು ರಾಜ್ಯ ಸರ್ಕಾರದ ಸ್ವತ್ತು ಎಂದು ಪರಿಗಣಿಸಲಾಗುತ್ತದೆ. ವಲಯ ಅರಣ್ಯಾಧಿಕಾರಿ ಅಮಾನತ್ತುಪಡಿಸಿಕೊಂಡ ಮಾಲನ್ನು ಪರಿಶೀಲಿಸಿ ಪ್ರಕರಣದಲ್ಲಿ ವಶಪಡಿಸಿಕೊಂಡಿರುವ ಮಾಲು ಶ್ರೀಗಂಧವೇ ಎಂದು ದೃಢೀಕರಿಸಿ ಪ್ರಮಾಣ ಪತ್ರ ಸಲ್ಲಿಸಿರುತ್ತಾರೆ. ಆದ್ದರಿಂದ ಅಮಾನತ್ತುಪಡಿಸಿಕೊಂಡ ಆಟೋರಿಕ್ಷಾ ನೋಂದಾವಣೆ ಸಂಖ್ಯೆ: ಸಿಟಿಎಸ್-7089 ರಲ್ಲಿ ಇದ್ದ ಮಾಲು ಶ್ರೀಗಂಧದೇ ಆಗಿರುತ್ತದೆ ಎಂದು ದೃಢಪಟ್ಟಿರುತ್ತದೆ.

ಅರಣ್ಯ ಕಾಯಿದೆ 1963 ಕಲಂ 84ರ ಪ್ರಕಾರ ಶ್ರೀಗಂಧವು ಸರ್ಕಾರದ ಸ್ವತ್ತಾಗಿರುತ್ತದೆ.

(1) all Sandal trees which may grow in any land after the date of the commencement of this Act, and

(2) all Sandal trees existing on any land prior to the commencement of the Act. 2(***) shall be the exclusive property of the State Government.

3. (2) Where in any proceedings taken under this Act, a question arises as to whether any sandalwood is the property of the State Government, it shall, until the contrary is proved, be presumed to be the part of a sandal tree which was the exclusive property of the State Government under sub-section (1), and in the case of any prosecution, the burden of proving the contrary shall lie on the accused.

ಅರ್ಜಿದಾರರಿಗೆ ಸೇರಿದ ಆಟೋರಿಕ್ಷಾ ನೋಂದಾವಣೆ ಸಂಖ್ಯೆ: ಸಿಟಿಎಸ್-7089 ರಲ್ಲಿ ಸರ್ಕಾರದ ಸ್ವತ್ತಾದ ಶ್ರೀಗಂಧದ ತುಂಡುಗಳು 28=48 ಕೆಜಿಯನ್ನು ಅಕ್ರಮವಾಗಿ ಸಾಗಿಸಲು ಬಳಸಲಾಗಿದ್ದು ವಾಹನದ ಮಾಲೀಕರು ನೇಮಿಸಿದ ಚಾಲಕನನ್ನು ಮಾಲು ಸಮೇತ ಬಂಧಿಸಿದ್ದು ನ್ಯಾಯಾಂಗ ಬಂಧನಕ್ಕೆ ಸಹ ನೀಡಿರುತ್ತಾರೆ ಸದರಿ ವಿಷಯವನ್ನು ಅರ್ಜಿದಾರರು ಅಲ್ಲಗಳೆದಿರುತ್ತಾರೆ. ಸದರಿ ವೇಳೆ ಅವರ ಆರೋಪ ನಿಜವೆಂದು ಭಾವಿಸಬೇಕಾದಲ್ಲಿ ಅದಕ್ಕೆ ಸಮರ್ಪಕ ಸಾಕ್ಷ್ಯಾಧಾರಗಳನ್ನು ಒದಗಿಸುವ ಜವಾಬ್ದಾರಿ ಆರೋಪವನ್ನು ಎದುರಿಸುವ ಅರ್ಜಿದಾರನದಾಗಿದ್ದು ಹಾಲಿ ಈ ಪ್ರಕರಣದಲ್ಲಿ

ಅರ್ಜಿದಾರರು ತಾನು ಮಾಡದೇ ಇರುವ ಆಪಾದನೆಯನ್ನು ಪುರಾವೆ ಮಾಡುವಲ್ಲಿ ಸಾಕ್ಷ್ಯಧಾರಗಳನ್ನು ಹಾಜರುಪಡಿಸದ ಕಾರಣ ಅರ್ಜಿದಾರರ ವಾಹನ ಅಕ್ರಮ ಮರಗಳ ಕಳ್ಳಸಾಗಾಣಿಕೆಯಲ್ಲಿ ಭಾಗಿಯಾಗಿರುವುದು ನಿಸ್ಸಂದೇಹವಾಗಿ ಪುರಾವೆಯಾಗಿರುತ್ತದೆ. ಆದ್ದರಿಂದ ಪ್ರಕರಣದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆ. ಆದ್ದರಿಂದ ಅಂಶ 5ಕ್ಕೆ ಉತ್ತರ ಹೌದು ಎಂಬುದಾಗಿದೆ.

ಈ ಮೇಲಿನ ಅಂಶಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ವಾಹನದ ಮಾಲೀಕರು ಅರಣ್ಯ ಉತ್ಪನ್ನ ಕಳ್ಳ ಸಾಗಾಣಿಕೆಯಲ್ಲಿ ವಾಹನವನ್ನು ಉಪಯೋಗಿಸಿರುವುದು ಸ್ಪಷ್ಟವಾಗಿ ಕಂಡುಬಂದಿರುತ್ತದೆ. ಅಲ್ಲದೆ ಪ್ರಾಧಿಕಾರಕ್ಕೆ ಹಾಜರುಪಡಿಸಿದ ಪ್ರಕರಣದ ಮಹಜರ್ ನಿಶಾನೆ ಪಿ1 ಪ್ರಕಾರ ಹಾಗೂ ಪ್ರಾಸಿಕ್ಯೂಷನ್ ಸಾಕ್ಷಿಗಳಾದ ಪಿಡಬ್ಲ್ಯೂ 1 ಮತ್ತು ಪಿಡಬ್ಲ್ಯೂ 2 ರವರು ಪ್ರಾಧಿಕಾರದಲ್ಲಿ ಸಾಕ್ಷಿ ನುಡಿದಂತೆ ಶ್ರೀಗಂಧದ ತುಂಡುಗಳು 28=48 ಕೆಜಿಯನ್ನು ಸಾಗಿಸಲು ಆಟೋರಿಕ್ಷಾ ಸಂಖ್ಯೆ: ಸಿಟಿಎಸ್-7089ನ್ನು ಬಳಸಿಕೊಂಡಿರುವುದು ಸ್ಪಷ್ಟವಾಗಿ ಕಂಡು ಬಂದಿರುತ್ತದೆ. ಅಲ್ಲದೇ ನನ್ನ ಮುಂದೆ ಹಾಜರುಪಡಿಸಿದ ದಾಖಲಾತಿಗಳು ಸಾಕ್ಷ್ಯಧಾರಗಳು ಮತ್ತು ವಾದ ವಿವಾದಗಳಿಂದ ವಾಹನ ಮಾಲೀಕರಾಗಲೀ ಇಲ್ಲವೇ ವಾಹನ ಉಸ್ತುವಾರಿದಾರರಾಗಲೀ ವಾಹನವು ಅರಣ್ಯ ಉತ್ಪನ್ನ ಅಕ್ರಮ ಸಾಗಾಣಿಕೆಯಲ್ಲಿ ಭಾಗಿ ಆಗದಂತೆ ಮುಂಜಾಗ್ರತೆ ಕ್ರಮ ತೆಗೆದುಕೊಳ್ಳದೇ ಬದಲಾಗಿ ತಮಗೆ ಗೊತ್ತಿದ್ದೆ ಈ ಎಲ್ಲಾ ವ್ಯಕ್ತಿಗಳು ಈ ವಾಹನದಲ್ಲಿ ಅಕ್ರಮವಾಗಿ ಅರಣ್ಯ ಉತ್ಪನ್ನವನ್ನು ಅರಣ್ಯ ಕಾಯಿದೆ ಮತ್ತು ಕಾನೂನಿನ ವಿರುದ್ದವಾಗಿ ಸಾಗಿಸಲು ಉಪಯೋಗಿಸಿದ್ದಾರೆಂದು ತೀರ್ಮಾನಿಸಿ ಈ ಕೆಳಕಂಡ ಆದೇಶ ನೀಡಬಯಸುತ್ತೇನೆ.

**ಅಂತಿಮ ಆದೇಶ**

ಈ ಮೇಲ್ಕಾಣಿಸಿದ ಪ್ರಕರಣಕ್ಕೆ ಸಂಬಂಧಿಸಿದಂತೆ ಎಲ್ಲಾ ಅಗತ್ಯ ದಾಖಲಾತಿಗಳನ್ನು ಹಾಗೂ ಸಾಕ್ಷ್ಯಾಧಾರಗಳನ್ನು ಮತ್ತು ಎಲ್ಲಾ ಅರ್ಜಿಗಳನ್ನು ಗಣನೆಗೆ ತೆಗೆದುಕೊಂಡು ಶ್ರೀಮತಿ ಸೀಮಾಗರ್ಗ್ ಭಾ.ಅ.ಸೇ., ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಭದ್ರಾವತಿ ವಿಭಾಗ, ಭದ್ರಾವತಿ ಆದ ನಾನು ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71 (ಎ) (2ನೇ ತಿದ್ದುಪಡಿ) ಪ್ರಕಾರ ನೋಂದಾವಣೆ, ಸಂಖ್ಯೆ: ಸಿಟಿಎಸ್-7089 (ಇಂಜಿನ್ ನಂ.22ಇ-218715 ಛಾಸೀಸ್ ನಂ.22ಸಿ-2060865) ಮತ್ತು ಅದರಲ್ಲಿ ಅಕ್ರಮವಾಗಿ ಸಾಗಿಸುತ್ತಿದ್ದ ಶ್ರೀಗಂಧದ ತುಂಡುಗಳು 24=48 ಕೆಜಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಆದೇಶ ಹೊರಡಿಸಿದೆ.

ಈ ಆದೇಶದ ವಿರುದ್ದ ಮೇಲ್ಮನವಿ ಸಲ್ಲಿಸುವುದಾದಲ್ಲಿ ಈ ಆದೇಶ ಹೊರಡಿಸಿದ 30 ದಿವಸಗಳೊಳಗೆ ಸಲ್ಲಿಸಬಹುದಾಗಿದೆ ತಪ್ಪಿದಲ್ಲಿ ಇದೇ ಅಂತಿಮ ಆದೇಶವಾಗಿ ಊರ್ಜಿತಗೊಳ್ಳುತ್ತದೆ ಅಲ್ಲದೇ ಮೇಲ್ಮನವಿ ಅವಧಿ ಮೀರಿದ ಬಳಿಕ ವಾಹನ ಹಾಗೂ ಅರಣ್ಯ ಉತ್ಪನ್ನವನ್ನು ಕಾನೂನು ರೀತ್ಯ ವಿಲೇವಾರಿ ಮಾಡಲು ಕೂಡ ಆದೇಶಿಸಲಾಗಿದೆ.

ಈ ಆದೇಶವನ್ನು ದಿನಾಂಕ: 21.2.2005 ರಂದು ಕರೆದು ನ್ಯಾಯಾಲಯದ ಮೊಹರು ಹಾಗೂ ನನ್ನ ಸಹಿಯೊಂದಿಗೆ ಹೊರಡಿಸಿರುತ್ತೇನೆ.

**ಸೀಮಾಗರ್ಗ್**

ಪಿ.ಆರ್. 468 ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,

ಭದ್ರಾವತಿ ವಿಭಾಗ, ಭದ್ರಾವತಿ.

**ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ನ್ಯಾಯಾಲಯ, ವನ್ಯಜೀವಿ ವಿಭಾಗ, ಶಿವಮೊಗ್ಗ**

**ಸಂಖ್ಯೆ: ಎ3:ಅಮೊ:ಶ್ರೀಗಂಧ:ಬಜಾಜ್ ಎಮ್-80:4485/2003-04, ದಿನಾಂಕ: 28ನೇ ಫೆಬ್ರವರಿ 2005**

**ವಿಷಯ:** ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದಾಗ ಸರ್ಕಾರದ ಪರ ವಶಪಡಿಸಿಕೊಂಡಿರುವ ಬಜಾಜ್ ಎಂ-80 ಸ್ಕೂಟರ್ ನೋಂದಣಿ ಸಂಖ್ಯೆ: ಕೆಎ-14-4485ನ್ನು ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ.

**ಉಲ್ಲೇಖ:**
1) ವಲಯ ಅರಣ್ಯಾಧಿಕಾರಿ, ಹಣಗೆರೆ ವನ್ಯಜೀವಿ ವಲಯ, ಸಿರಿಗೆರೆ ಇವರ ಪತ್ರದ ಸಂಖ್ಯೆ: ಹವಸಿ:117/2003-04 ದಿನಾಂಕ: 23.07.2003.
2) ಈ ಕಛೇರಿಯ ನ್ಯಾಯಾಲಯದಿಂದ ಹೊರಡಿಸಲಾದ ದಿನಾಂಕ: 5.8.2004ರ ಪ್ರಕಟಣೆ ಸಹ್ಯಾದ್ರಿ ಕನ್ನಡ ದಿನಪತ್ರಿಕೆಯಲ್ಲಿ ದಿನಾಂಕ: 19.08.2004 ಹಾಗೂ ಕರ್ನಾಟಕ ರಾಜ್ಯಪತ್ರದಲ್ಲಿ ದಿನಾಂಕ: 02.09.2004 ರಂದು ಪ್ರಕಟವಾಗಿರುತ್ತದೆ.

**ಪ್ರಕರಣದ ಹಿನ್ನೆಲೆ:**

ಹಣಗೆರೆ ವನ್ಯಜೀವಿ ವಲಯದ ವಲಯ ಅರಣ್ಯಾಧಿಕಾರಿ, ಮತ್ತು ಸಿಬ್ಬಂದಿಗಳು ದಿನಾಂಕ: 23.07.2003 ರಂದು ಹಣಗೆರೆ ಮನ್ನಾಜಂಗಲಿಯಲ್ಲಿ ಗಸ್ತು ತಿರುಗುತ್ತಿದ್ದಾಗ, ಬೆಳ್ಳೂರು-ಬಸವಾಪುರ ರಸ್ತೆಯಲ್ಲಿ, ಬೆಳ್ಳೂರು ಕಡೆಯಿಂದ ವೇಗವಾಗಿ ಬರುತ್ತಿದ್ದ ದ್ವಿಚಕ್ರ ವಾಹನವನ್ನು ಕಂಡು ಅನುಮಾನಾಸ್ಪದವಾಗಿ ಈ ವಾಹನವನ್ನು ನಿಲ್ಲಿಸಲು ಸೂಚಿಸಿದ್ದು, ಸದರಿ ವಾಹನದ ಚಾಲಕ ವಾಹನವನ್ನು ನಿಲ್ಲಿಸದೇ ವೇಗವಾಗಿ ಓಡಿಸಿಕೊಂಡು ಹೋಗಿರುತ್ತಾನೆ. ಕರ್ತವ್ಯನಿರತ ಸಿಬ್ಬಂದಿಗಳು ಸದರಿ ದ್ವಿಚಕ್ರ ವಾಹನವನ್ನು ಇಲಾಖಾ ವಾಹನದ ಸಹಾಯದಿಂದ ಬೆನ್ನಟ್ಟಿ ವಾಹನ ಮತ್ತು ಚಾಲಕನನ್ನು ಹಿಡಿದು, ಕೂಲಂಕುಶವಾಗಿ ವಾಹನವನ್ನು ಪರಿಶೀಲಿಸಿ ನೋಡಿದಾಗ, ಒಟ್ಟು 8.00 ಕೆ.ಜಿ. ಶ್ರೀಗಂಧದ ತುಂಡುಗಳು ಮತ್ತು ಚಕ್ಕೆಯನ್ನು ಅಕ್ರಮವಾಗಿ ಸಾಗಾಣಿಕೆ ಮಾಡುತ್ತಿದ್ದುದನ್ನು ಕಂಡು, ಅರಣ್ಯ ಮೊಕದ್ದಮೆ ದಾಖಲಿಸಿರುತ್ತಾರೆ, ಹಾಗೂ ದಸ್ತಗಿರಿ ಮಾಡಿದ ವ್ಯಕ್ತಿಯನ್ನು ನ್ಯಾಯಾಂಗ ವಶಕ್ಕೆ ನೀಡಿರುತ್ತಾರೆ. ತದನಂತರ ಕರ್ನಾಟಕ ಅರಣ್ಯ ಕಾಯಿದೆ 1963ರ ಕಲಂ 86, 71ಎ ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ನಿಯಮ 144ರ ಪ್ರಕಾರ ತಕ್ಷೀರು ದಾಖಲಿಸಿ, ಪ್ರಥಮ ಮಾಹಿತಿ ವರದಿ, ಅಮಾನತ್ತು ವರದಿ, ವಾಹನ, ಶ್ರೀಗಂಧದ ತುಂಡುಗಳು ಮತ್ತು ಚಕ್ಕೆ ಸಮೇತ ಕರ್ನಾಟಕ ಅರಣ್ಯ ಕಾಯಿದೆ 1963ರ ಕಲಂ 71ಎ ಪ್ರಕಾರ ಮುಂದಿನ ಕ್ರಮ ಕೈಗೊಳ್ಳಲು ಪ್ರಾಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ವನ್ಯಜೀವಿ ವಿಭಾಗ, ಶಿವಮೊಗ್ಗ ಇವರ ಸಮ್ಮುಖದಲ್ಲಿ ಹಾಜರುಪಡಿಸಿರುತ್ತಾರೆ.

ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ, ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71ಎ ಪ್ರಕಾರ 30 ದಿವಸಗಳ ಕಾಲಾವಕಾಶವನ್ನು ಕೊಟ್ಟು ವಾಹನದ ವಾರಸುದಾರರು ಯಾರಾದರೂ ಇದ್ದರೆ, ವಾಹನಕ್ಕೆ ಸಂಬಂಧಿಸಿದ ಮೂಲ ದಾಖಲಾತಿಗಳೊಂದಿಗೆ ಹಕ್ಕು ಬಾಧ್ಯತೆಗಳನ್ನು ಹಾಜರುಪಡಿಸಲು ಮತ್ತು ಶ್ರೀಗಂಧ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ಸದರಿ ವಾಹನವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು? ಎಂಬ ಬಗ್ಗೆ, ತಿಳುವಳಿಕೆ ಪತ್ರವನ್ನು ದಿನಾಂಕ: 02.09.2004 ರಂದು ಕರ್ನಾಟಕ ರಾಜ್ಯ ಪತ್ರದಲ್ಲಿ ಮತ್ತು ಸಹ್ಯಾದ್ರಿ ಕನ್ನಡ ಸ್ಥಳೀಯ ದಿನ ಪತ್ರಿಕೆಯಲ್ಲಿ ದಿನಾಂಕ: 19.08.2004 ರಂದು ಪ್ರಕಟಿಸಲಾಗಿರುತ್ತದೆ.

ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಶಿವಮೊಗ್ಗ ಇವರು ನೀಡಿದ ಬಿ ಎಕ್ಸ್‌ಟ್ರಾಕ್ಟ್ ಪ್ರಕಾರ ವಾಹನದ ಮೂಲ ಖರೀದಿದಾರರಿಗೆ, ವಾಹನದ ಮೂಲ ದಾಖಲಾತಿಗಳೊಂದಿಗೆ ಹಕ್ಕು ಬಾಧ್ಯತೆಗಳನ್ನು ಹಾಜರುಪಡಿಸಲು ಮತ್ತು ಕಳ್ಳ ಸಾಗಾಣಿಕೆಯಲ್ಲಿ ತೊಡಗಿಸಿರುವ ಸಂಬಂಧ ವಾಹನವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ಸೂಕ್ತ ಸಮಜಾಯಿಷಿ ನೀಡಲು ಮೂಲ ಖರೀದಿದಾರರಿಗೆ ದಿನಾಂಕ: 20.02.2004 ಮತ್ತು 19.05.2004 ರಂದು ನೋಟೀಸ್ ನೀಡಲಾಗಿರುತ್ತದೆ. ಈ ನೋಟೀಸ್‌ಗೆ ಮೂಲ ಖರೀದಿದಾರರು ಸದರಿ ವಾಹನವನ್ನು ಮಾರಾಟ ಮಾಡಿರುವುದಾಗಿ ತಿಳಿಸುತ್ತಾ, ವಾಹನ ಪಡೆದ ವ್ಯಕ್ತಿಯ ವಿಳಾಸವನ್ನು ನೀಡಿರುತ್ತಾರೆ. ಸದರಿ ವಿಳಾಸ ನೀಡಿದ ವ್ಯಕ್ತಿಗೆ ನೋಂದಾಯಿತ ಅಂಚೆ ಮೂಲಕ ದಿನಾಂಕ: 14.06.2004, 09.11.2004 ಮತ್ತು 01.01.2005 ರಂದು ನೋಟೀಸ್‌ಗಳನ್ನು ನೀಡಲಾಗಿದ್ದು, ಸದರಿಯವರು ಈ ವಾಹನವನ್ನು ಪುನಃ ಮಾರಾಟ ಮಾಡಲಾಗಿದೆ ಎಂದು ತಿಳಿಸಿದ ಮೇರೆಗೆ, ಅವರಿಗೂ ಸಹ ದಿನಾಂಕ: 05.02.2005 ರಂದು ನೋಟೀಸ್ ನೀಡಲಾಗಿರುತ್ತದೆ. ಸದರಿಯವರು ಜವಾಬಾಗಲೀ ಅಥವಾ ಖುದ್ದು ಈ ನ್ಯಾಯಾಲಯಕ್ಕೆ ಬಂದು ಹೇಳಿಕೆಯನ್ನಾಗಲೀ ನೀಡಿರುವುದಿಲ್ಲ. ಸಾಕಷ್ಟು ಕಾಲಾವಕಾಶ ಕೊಟ್ಟರೂ, ಸದರಿ ವಾಹನದ ಬಗ್ಗೆ ತಮ್ಮ ಮಾಲೀಕತ್ವವನ್ನು ದೃಢೀಕರಿಸಿ ವಾಹನವನ್ನು ವಶಕ್ಕೆ ಇದುವರೆಗೆ ಕೋರದೇ ಇರುವುದನ್ನು ನೋಡಿದರೆ, ಈ ವಾಹನ ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿಸಿ, ಉಪಯೋಗಿಸಲ್ಪಟ್ಟಂತಹ ವಾಹನವೆಂದು ದೃಢವಾಗುತ್ತದೆ. ವಾಹನದ ಮಾಲೀಕರು ಮಾಲೀಕತ್ವದ ಬಗ್ಗೆ, ಮೂಲ ದಾಖಲಾತಿಗಳನ್ನು ಹಾಜರುಪಡಿಸಿ, ತಾವು ತಪ್ಪಿತಸ್ಥರಲ್ಲವೆಂಬುದನ್ನು ಸಾಬೀತುಪಡಿಸಲು ವಿಫಲರಾದ ಕಾರಣ, ಮೇಲ್ಕಂಡ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಈ ಕೆಳಕಂಡ ಆದೇಶ ನೀಡಿರುತ್ತೇನೆ.

**ಆದೇಶ**

ಮೇಲ್ಕಂಡ ವಿದ್ಯಮಾನಗಳ ಅನುಸಾರವಾಗಿ ಶ್ರೀ ಜಿ.ಎ.ಎನ್. ಕರ್ಕೀಕರ್, ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ವನ್ಯಜೀವಿ ವಿಭಾಗ, ಶಿವಮೊಗ್ಗ ಆದ ನಾನು ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71ಎ ಪ್ರಕಾರ ಈ ಪ್ರಕರಣದಲ್ಲಿ ಅಮಾನತ್ತುಪಡಿಸಿರುವ ಬಜಾಜ್ ಎಂ-80 ಸ್ಕೂಟರ್ ನೋಂದಣಿ ಸಂಖ್ಯೆ: ಕೆಎ-14-4485 (ಇಂಜಿನ್ ಸಂಖ್ಯೆ: 16ಇ 94ಎಲ್ 132881328, ಛಾಸ್ಸಿಸ್ ಸಂಖ್ಯೆ: 16094 ಎಲ್80824) ಮತ್ತು ಒಟ್ಟು 8.00 ಕೆ.ಜಿ. ಶ್ರೀಗಂಧದ ತುಂಡುಗಳು ಮತ್ತು ಚಕ್ಕೆಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಮುಟ್ಟುಗೋಲು ಹಾಕಿಕೊಂಡಿರುವ ವಾಹನ ಮತ್ತು ಅದರ ಬಿಡಿ ಭಾಗಗಳನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇಮಾಡಲು ಆದೇಶಿಸಿದ್ದೇನೆ. ಸದರಿ ವಾಹನ ಮತ್ತು ಶ್ರೀಗಂಧದ ತುಂಡುಗಳು ಮತ್ತು ಚಕ್ಕೆಗಳು ಎಲ್ಲಾ ಋಣ ಭಾರಗಳಿಂದ ಮುಕ್ತವಾಗಿರುತ್ತದೆ.

ಈ ಆದೇಶವನ್ನು ಹೊರಡಿಸಿದ 30 ದಿನಗಳೊಳಗೆ ವಾಹನದ ವಾರಸುದಾರರು ನಿಯಮಾನುಸಾರ ಮೇಲ್ಮನವಿ ಸಲ್ಲಿಸದಿದ್ದರೆ ಇದೇ ಅಂತಿಮ ಆದೇಶವಾಗಿರುತ್ತದೆ. ಈ ಆದೇಶವನ್ನು ದಿನಾಂಕ: 28.02.2005 ರಂದು ಬೆರಳಚ್ಚಿಸಿ ಈ ನ್ಯಾಯಾಲಯದ ಮೊಹರು ಹಾಕಿ ನನ್ನ ಸಹಿಯೊಂದಿಗೆ ಹೊರಡಿಸಿರುತ್ತೇನೆ.

**ಜಿ.ಎ.ಎನ್. ಕರ್ಕೀಕರ್**

ಪಿ.ಆರ್. 473 ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ವನ್ಯಜೀವಿ ವಿಭಾಗ, ಶಿವಮೊಗ್ಗ.

**PROCEEDINGS OF THE REGISTERING AUTHORITY AND REGIONAL TRANSPORT OFFICER, INDIRANAGAR, BANGALORE (EAST), BANGALORE-38**

**Present:** Afzal Ahamed Khan,
Regional Transport Officer & Registering Authority, Indiranagar, Bangalore (East).

**Sub:** Cancellation of registration certificate in respect of M.V.No. KA-01-7200 SCHOOL BUS.

**Ref:** Application dated: 02.02.2005.

**PREAMBLE:**

The registered owner of M.V. bearing registration Secretary, James English Nursery and Primary School. Aralahalli, Bangalore-49 in his letter dated: 02.02.2005 has requested to cancel the registration certificate Since the M.V. is not road worthy and irreparable.

In view of the above facts I pass the following:-

**ORDER No. RTO.BNG.E.RGN/TR.PR./KA-01-7200/04-05, Dated: 11th February 2005**

In exercise of the powers vested under Sec. 55(1) of the Motor Vehicle Act, 1988, I Afzal Ahmed Khan, Registering Authority & Regional Transport Officer, Bangalore (East) do hereby cancel the registration & Registration Certificate of No. KA-01-7200 (School Bus) wef 11.02.2005 as desired by the registered owner without prejudice and subject to recover the arrears or tax of penalty due if any found later on.

The brief description of the M.V. is as follows:

1. M.V.No. : KA-01-7200
2. Class of Vehicle : School Bus
3. Type of Body : Semi saloon
4. Chassis No. : ALEH-174299
5. Engine No. : ALEH35944
6. Year of Manufacture : 1985

**AFZAL AHMED KHAN**

P.R. 474 Regional Transport Officer, Indiranagar, Bangalore (East).

**ಗೃಹ ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಕಾವೇರಿ ಭವನ, ಬೆಂಗಳೂರು**

**ಭೂಸ್ವಾಧೀನ ಕಾಯ್ದೆ ಕಲಂ 4(1)ರ ಅಧಿಸೂಚನೆಯ ಕ್ರಮಾಂಕ: ಕಗೃಮಂ/ಭೂಸ್ವಾವಿ.6/04-05, ದಿನಾಂಕ: 11ನೇ ಮಾರ್ಚ್ 2005**

ಈ ಅಧಿಸೂಚನೆಯಲ್ಲಿ ನಮೂದಿಸಿರುವ ಜಮೀನುಗಳು ಸಾರ್ವಜನಿಕ ಉದ್ದೇಶಕ್ಕೆ ಅಂದರೆ ಗೃಹ ಮಂಡಳಿಯ ವಸತಿ ಯೋಜನೆಗೆ ಬೇಕಾಗುವುದೆಂದು ಗೃಹ ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು ರವರಿಗೆ ಕಂಡುಬಂದಿದೆ.

1991ನೇ ಸಾಲಿನ ಕರ್ನಾಟಕ ಭೂ ಸ್ವಾಧೀನ ಅಧಿನಿಯಮ 33 ರಲ್ಲಿ ತಿದ್ದುಪಡಿಯಾದ 1894ನೇ ಸಾಲಿನ ಭೂಸ್ವಾಧೀನ ಅಧಿನಿಯಮ 4(2)ನೆಯ ಪ್ರಕರಣದಲ್ಲಿ ವಿಹಿತವಾದ ಅಧಿಕಾರವನ್ನು ಉಪಯೋಗಿಸಲು ಗೃಹ ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು ಇವರಿಗೆ ಮತ್ತು ಸಿಬ್ಬಂದಿ ವರ್ಗದವರಿಗೆ ಅಧಿಕಾರ ನೀಡಲಾಗಿದೆ.

ಸದರಿ ಜಮೀನಿನಲ್ಲಿ ಆಸಕ್ತಿಯುಳ್ಳ ಯಾವೊಬ್ಬ ವ್ಯಕ್ತಿಯೂ ಭೂಸ್ವಾಧೀನದ ಬಗ್ಗೆ ಆಕ್ಷೇಪಣೆಗಳನ್ನು ಮಾಡುವುದಿದ್ದಲ್ಲಿ ಅಂತಹ ಆಕ್ಷೇಪಣೆಗಳನ್ನು ಈ ಅಧಿಸೂಚನೆಯು ಪ್ರಕಟಗೊಂಡ ತಾರೀಖಿನಿಂದ 30 ದಿನಗಳೊಳಗಾಗಿ 1991ನೇ ಇಸವಿ ಕರ್ನಾಟಕ ಭೂ ಸ್ವಾಧೀನ ಅಧಿನಿಯಮ ಕಾಯ್ದೆ 33 ರಲ್ಲಿ ತಿದ್ದುಪಡಿಯಾದ 1894ನೇ ಸಾಲಿನ ಭೂ ಸಂಗ್ರಹಣ ಅಧಿನಿಯಮದ 3ರ ಪ್ರಕರಣದ ಮೇರೆಗೆ ಜಿಲ್ಲಾಧಿಕಾರಿಗಳ ಪ್ರಶಾಸನ ಕಾರ್ಯಗಳನ್ನು ನಿರ್ವಹಿಸಲು, ನೇಮಕ ಮಾಡಲಾದ ವಿಶೇಷ ಭೂಸ್ವಾಧೀನಾಧಿಕಾರಿಗಳು, ಕರ್ನಾಟಕ ಗೃಹ ಮಂಡಳಿ, ಕಾವೇರಿ ಭವನ, ಬೆಂಗಳೂರು ರವರಿಗೆ ಲಿಖಿತ ಮೂಲಕ ಅರ್ಜಿಗಳನ್ನು ಸಲ್ಲಿಸತಕ್ಕದ್ದು. ಸದರಿ ಜಮೀನಿನ ಅಧಿಕೃತ ಸಂಗ್ರಹಣೆಗಾಗಿ ನಿಯೋಜಿಸಲ್ಪಟ್ಟ ಯಾವೊಬ್ಬ ಮೋಜಣಿದಾರರು ಅಥವಾ ಬೇರೆ ಯಾವುದೇ ಅಧಿಕಾರಿಗೆ ಅಡಚಣೆಗಳನ್ನುಂಟು ಮಾಡುವುದಾಗಲೀ ಅಥವಾ ಅತಿಕ್ರಮಿಸುವುದಾಗಲೀ ಮಾಡಬಾರದೆಂದು ಸದರಿ ಜಮೀನಿನಲ್ಲಿ ಆಸಕ್ತಿಯುಳ್ಳ ಎಲ್ಲರಿಗೂ ಈ ಮೂಲಕ ಎಚ್ಚರಿಕೆ ಕೊಡಲಾಗಿದೆ. ಸದರಿ ಜಮೀನಿನ ವಿಲೇವಾರಿಗಾಗಿ ಮಾರಾಟ ಗುತ್ತಿಗೆ, ಅಡಮಾನ, ಹಸ್ತಾಂತರಣ, ವಿನಿಮಯ ಇನ್ನಾವುದೇ ರೀತಿಯ ಒಪ್ಪಂದಗಳನ್ನು ಅಥವಾ ಯಾವೊಂದು ವೆಚ್ಚ ಯಾ ಅಭಿವೃದ್ಧಿಗಳನ್ನು ಈ ಅಧಿಸೂಚನೆ ಪ್ರಕಟವಾದ ನಂತರ ಗೃಹ ಆಯುಕ್ತರವರ ಮಂಜೂರಾತಿಯನ್ನು ಪಡೆಯದೆಯೇ ಮಾಡಿದ ಪಕ್ಷದಲ್ಲಿ ಅಂತಿಮವಾಗಿ ಆಧಿಕೃತ ಸಂಗ್ರಹಣೆ ಮಾಡಲಾಗುವ ಸದರೀ ಜಮೀನಿನ ಅಂತಹ ಭೂ ಪರಭಾರೆಯ ಪರಿಹಾರವನ್ನು ನಿರ್ಧರಿಸುವ ಅಧಿಕಾರಿಯಿಂದ ಸದರಿ ಅಧಿನಿಯಮ 24ನೇ ಪ್ರಕರಣದ ಮೇರೆಗೆ ಉಪೇಕ್ಷಿಸಲಾಗುವುದು.

ಸದರಿ ಜಮೀನಿನ ಒಂದು ನಕ್ಷೆಯನ್ನು ವಿಶೇಷ ಭೂ ಸ್ವಾಧೀನ ಅಧಿಕಾರಿಗಳು, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು, ಕಾವೇರಿ ಭವನ ಇವರ ಕಾರ್ಯಾಲಯದಲ್ಲಿ ಪರಿಶೀಲನೆಗಾಗಿ ಇಡಲಾಗಿದೆ.

**ಜಿಲ್ಲೆ:** ಚಾಮರಾಜನಗರ **ತಾಲ್ಲೂಕು:** ಚಾಮರಾಜನಗರ **ಹೋಬಳಿ:** ಕಸಬಾ **ಗ್ರಾಮ:** ಚಾಮರಾಜನಗರ

| ಕ್ರ. ಸಂ. | ಖಾತೆದಾರರ ಹೆಸರು | ಅನುಭವ ದಾರರ ಹೆಸರು | ಸರ್ವೆ ನಂ. | ತರಹೆ | ಚಕ್ಕುಬಂದಿ | | | | ವಿಸ್ತೀರ್ಣ | ಆಕಾರ ರೂ.ಪೈ. |
|---|---|---|---|---|---|---|---|---|---|---|
| | | | | | ಪೂರ್ವ ಸರ್ವೆ ನಂ. | ಪಶ್ಚಿಮ ಸರ್ವೆ ನಂ. | ಉತ್ತರ ಸರ್ವೆ ನಂ. | ದಕ್ಷಿಣ ಸರ್ವೆ ನಂ | | |
| 1 | 2 | 3 | 4 | 5 | 6 | 7 | 8 | 9 | 10 | 11 |
| 1 | ಮಸೂದ್ ಅಹಮದ್ ಬಿನ್ ಖಲೀಲ್ ಅಹಮದ್ ಷರೀಫ್ | ಮಸೂದ್ ಅಹಮದ್ | 652 | ಖುಷ್ಕಿ | 653 | 651 | 654 | ರಸ್ತೆ | 0-20 | |
| 2 | ರಾಹಿಲ್ ಅಹಮದ್ ಬಿನ್ ಖಲೀಲ್ ಅಹಮದ್ ಷರೀಫ್ | ರಾಹಿಲ್ ಅಹಮದ್ | 652 | ಖುಷ್ಕಿ | 653 | 651 | 654 | ರಸ್ತೆ | 1-18 | 4-45 |
| 3 | ರಾಹಿಲ್ ಅಹಮದ್ ಬಿನ್ ಖಲೀಲ್ ಅಹಮದ್ ಷರೀಫ್ | ರಾಹಿಲ್ ಅಹಮದ್ | 653 | ಖುಷ್ಕಿ | 666 | 652 | 654 665 | ರಸ್ತೆ | 2-18 | 5-91 |
| 4 | ಸೂಫಿಯಾ ಬೇಗಂ ಕೋಂ ಖಲೀಲ್ ಅಹಮದ್ ಷರೀಫ್ | ಸೂಫಿಯಾ ಬೇಗಂ | 654/1 | ಖುಷ್ಕಿ | 665 | 654/2 | 655 | 652, 653 | 1-11 1/2 | 6-21 |
| 5 | ಎನ್. ಸತೀಶ್ ಕುಮಾರ್ ಬಿನ್ ನರಸಿಂಹ ಜೆಟ್ಟಪ್ಪ | ಎನ್. ಸತೀಶ್ ಕುಮಾರ್ | | ಖುಷ್ಕಿ | 665 | 654/2 | 655 | 652, 653 | 1-11 1/2 | |
| 6 | ರಾಹಿಲ್ ಅಹಮದ್ ಬಿನ್ ಖಲೀಲ್ ಅಹಮದ್ ಷರೀಫ್ | ರಾಹಿಲ್ ಅಹಮದ್ | 654/2 | ಖುಷ್ಕಿ | 654/1 | 650 | 655 | 651, 652 | 2-31 | 6-69 |
| 7 | ಮಸೂದ್ ಅಹಮದ್ ಬಿನ್ ಖಲೀಲ್ ಅಹಮದ್ ಷರೀಫ್ | ಮಸೂದ್ ಅಹಮದ್ | 665 | ಖುಷ್ಕಿ | 661, 662 | 654, 655 | 661 | 653, 666 | 5-21 | 14-04 |
| | | | | | | | | **ಒಟ್ಟು** | **15-11** | |

ಗೃಹ ಆಯುಕ್ತರು,
ಕರ್ನಾಟಕ ಗೃಹ ಮಂಡಳಿ, ಬೆಂಗಳೂರು.

ಪಿ.ಡಿ.16

**ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ, ಬಸವ ಭವನ, ಹೈಗ್ರೌಂಡ್ಸ್, ಬೆಂಗಳೂರು-560 001**
**ಪ್ರಕಟಣೆ ಸಂಖ್ಯೆ: ಕರಾಆ/ಆಡಳಿತ/27/2004 ದಿನಾಂಕ: 1ನೇ ಮಾರ್ಚ್ 2005**

ಗ್ರಾಹಕ ಸಂರಕ್ಷಣಾ ಕಾಯ್ದೆ 1986ರಡಿಯಲ್ಲಿ ರಚಿತಗೊಂಡು, ಗ್ರಾಹಕರ ವ್ಯಾಜ್ಯಗಳನ್ನು ಇತ್ಯರ್ಥಪಡಿಸುವ ನ್ಯಾಯಿಕ ಸ್ವರೂಪದ ಕೆಲಸಗಳನ್ನು ನಿರ್ವಹಿಸುತ್ತಿರುವ ಬಾಗಲಕೋಟೆ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಸದಸ್ಯರ ಸ್ಥಾನಕ್ಕೆ ಸೂಕ್ತರಾದವರನ್ನು ಆಯ್ಕೆ ಮಾಡುವ ಸಲುವಾಗಿ ಈ ಮೂಲಕ ಅರ್ಜಿಯನ್ನು ಆಹ್ವಾನಿಸಲಾಗಿದೆ.

**ಜಿಲ್ಲಾ ವೇದಿಕೆಯ ಸದಸ್ಯರಾಗಿ ಆಯ್ಕೆ ಹೊಂದಲು ಈ ಕೆಳಕಂಡ ಅರ್ಹತೆಗಳು ಇರಬೇಕಾಗಿರುತ್ತದೆ.**

1) ಅರ್ಜಿಸಲ್ಲಿಸುವ ದಿನಾಂಕದಂದಿಗೆ 35 ವರ್ಷ ವಯಸ್ಸಾಗಿರಬೇಕು.
2) ಯಾವುದಾದರೂ ಅಂಗೀಕೃತ ವಿಶ್ವವಿದ್ಯಾನಿಲಯದ ಪದವೀಧರರಾಗಿರಬೇಕು.
3) ಪ್ರಾಮಾಣಿಕತೆ, ದಕ್ಷತೆ ಹಾಗೂ ನಿಷ್ಠೆ ಇರುವುದರ ಜೊತೆಗೆ ಅರ್ಥಶಾಸ್ತ್ರ/ ಕಾನೂನು/ ವಾಣಿಜ್ಯ/ ಲೆಕ್ಕಪತ್ರ/ ಕೈಗಾರಿಕೆ/ ಸಾರ್ವಜನಿಕ ವ್ಯವಹಾರಗಳು ಅಥವಾ ಸಾರ್ವಜನಿಕ ಆಡಳಿತ ಇವುಗಳಲ್ಲಿನ ಸಮಸ್ಯೆಗಳನ್ನು ಬಗೆಹರಿಸುವಲ್ಲಿ ಕನಿಷ್ಠ 10 ವರ್ಷಗಳ ಅನುಭವವುಳ್ಳವರಾಗಿರಬೇಕು.

ಮೇಲಿನ ಅರ್ಹತೆಯನ್ನು ಹೊಂದಿರುವವರು ಯಾವುದೇ ಶುಲ್ಕವಿಲ್ಲದಂತೆ ಅರ್ಜಿ ನಮೂನೆಗಳನ್ನು ಬಾಗಲಕೋಟೆ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ, ಹಳೇ ಎಸ್.ಪಿ. ಆಫೀಸ್ ಕಾಂಪೌಂಡ್, ನವನಗರ, ಬಾಗಲಕೋಟೆ-587 102 ಇಲ್ಲಿಂದ ಪಡೆದುಕೊಂಡು ಕ್ರಮಬದ್ಧವಾಗಿ ಭರ್ತಿ ಮಾಡಿದ ಅರ್ಜಿಗಳನ್ನು ದಿನಾಂಕ 16ನೇ ಏಪ್ರಿಲ್ 2005ರ ಸಂಜೆ 5.00 ಗಂಟೆಯೊಳಗೆ ಬಾಗಲಕೋಟೆ ಜಿಲ್ಲಾ ವೇದಿಕೆಯಲ್ಲಿ ಸಲ್ಲಿಸತಕ್ಕದ್ದು.

ಮಾನ್ಯ ಅಧ್ಯಕ್ಷರ ಆದೇಶಾನುಸಾರ,
**ಶ್ರೀದೇವಿ ಎಸ್. ಅಂಗಡಿ**
ರಿಜಿಸ್ಟ್ರಾರ್ ಮತ್ತು ಆಡಳಿತಾಧಿಕಾರಿಗಳು, ರಾಜ್ಯ ಗ್ರಾಹಕರ ಆಯೋಗ, ಬೆಂಗಳೂರು.

____________________ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ಪರಿಹಾರ ವೇದಿಕೆ/ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದ ಅಧ್ಯಕ್ಷರ/ಸದಸ್ಯರ ನೇಮಕಾತಿಗೆ ಅರ್ಜಿ

(ಅಭ್ಯರ್ಥಿಯು ತನ್ನ ಸ್ವಂತ ಕೈಬರಹದಲ್ಲಿ ಭರ್ತಿ ಮಾಡತಕ್ಕದ್ದು)

| | |
|---|---|
| ಅ. ಅರ್ಜಿಗಳನ್ನು ಕರೆದಿರುವ ರಾಜ್ಯ ಆಯೋಗದ ಅಧಿಸೂಚನೆ ಸಂಖ್ಯೆ ಮತ್ತು ದಿನಾಂಕ<br>ಆ. ಸದರಿ ಅಧಿಸೂಚನೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾಗಿರುವ ದಿನಾಂಕ<br>ಇ. ಸದರಿ ಅಧಿಸೂಚನೆ ದಿನಪತ್ರಿಕೆಗಳಲ್ಲಿ ಪ್ರಕಟವಾಗಿರುವ ದಿನಾಂಕ (ಯಾವ ಪತ್ರಿಕೆ, ಯಾವ ದಿನಾಂಕದಂದು, ಯಾವ ಪುಟ ಮತ್ತು ಯಾವ ಅಂಕಣ ಎಂಬುದನ್ನು ನಿರ್ದಿಷ್ಟಪಡಿಸಿ) | ಇತ್ತೀಚಿನ ಪಾಸ್‌ಪೋರ್ಟ್ ಸೈಜ್‌ನ ಭಾವಚಿತ್ರವನ್ನು ಲಗತ್ತಿಸಿ |

| | | |
|---|---|---|
| 1. | ಅಭ್ಯರ್ಥಿಯ ಪೂರ್ಣ ಹೆಸರು | ..................................................................<br>(ಸರ್‌ನೇಮ್) (ಹೆಸರು) |
| 2. | ನೀವು ನಿಮ್ಮ ಹೆಸರನ್ನು ಯಾವಾಗಲಾದರೂ ಬದಲಾಯಿಸಿಕೊಂಡಿದ್ದೀರಾ? ಹಾಗಿದ್ದಲ್ಲಿ, ಅದಕ್ಕೆ ಕಾರಣಗಳೊಂದಿಗೆ, ಪೂರ್ಣ ವಿವರಗಳನ್ನು ಮತ್ತು ಅದನ್ನು ಆಧರಿಸುವ ದಾಖಲೆಗಳ ದೃಢೀಕೃತ ಪ್ರತಿಗಳನ್ನು ಒದಗಿಸುವುದು. (ಈ ಕಾಲಂನಲ್ಲಿ ಒದಗಿಸಿರುವ ಖಾಲಿ ಜಾಗ ಸಾಲದೇ ಇದ್ದ ಸಂದರ್ಭದಲ್ಲಿ, ಹೆಚ್ಚುವರಿ ಪುಟಗಳನ್ನು ಉಪಯೋಗಿಸಿ) | |
| 3. | **ವಿಳಾಸಗಳು:** | |
| ಅ. | ಹಾಲಿ ನಿವಾಸದ ವಿಳಾಸ, (ದೂರವಾಣಿ ಸಂಖ್ಯೆ, ಈ-ಮೇಲ್ ವಿಳಾಸ, ಫ್ಯಾಕ್ಸ್ ಸಂಖ್ಯೆಯೊಂದಿಗೆ) | (ಅ) |
| ಆ. | ನೀವು ಯಾವುದಾದರೂ ಉದ್ಯೋಗದಲ್ಲಿದ್ದೀರಾ ಅಥವಾ ಯಾವುದೇ ವೃತ್ತಿಯಲ್ಲಿದ್ದೀರಾ? ಹಾಗಿದ್ದಲ್ಲಿ ಪೂರ್ಣ ವಿವರಗಳನ್ನು ಕೊಡಿ. (ದೂರವಾಣಿ ಸಂಖ್ಯೆ, ಈ-ಮೇಲ್ ವಿಳಾಸ ಮತ್ತು ಫ್ಯಾಕ್ಸ್ ಸಂಖ್ಯೆ) | (ಆ) |
| 4. | ತಂದೆಯ ಅಥವಾ ಪತಿಯ: | |
| (ಅ) | ಪೂರ್ಣ ಹೆಸರು | (ಅ) |
| (ಆ) | ಪ್ರಸ್ತುತ ನಿವಾಸದ ಪೂರ್ಣ ಅಂಚೆ ವಿಳಾಸ, ದೂರವಾಣಿ ಸಂಖ್ಯೆಯೊಂದಿಗೆ (ಬದುಕಿಲ್ಲದಿದ್ದರೆ, ಕೊನೆಯ ವಿಳಾಸವನ್ನು ನೀಡುವುದು) | (ಆ) |
| (ಇ) | ವೃತ್ತಿ-ವಿಳಾಸ ಮತ್ತು ದೂರವಾಣಿ ಸಂಖ್ಯೆಯೊಂದಿಗೆ (ಬದುಕಿಲ್ಲದಿದ್ದರೆ, ಕೊನೆಯ ವಿಳಾಸವನ್ನು ನೀಡುವುದು) | (ಇ) |

| | |
|---|---|
| 5. ಹುಟ್ಟಿದ ದಿನಾಂಕ (ಕ್ರಿಸ್ತಶಕದಲ್ಲಿ) ವಯಸ್ಸನ್ನು ರುಜುವಾತುಪಡಿಸಲು ಹುಟ್ಟಿದ ದಿನಾಂಕವನ್ನು ಒಳಗೊಂಡ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರದ ದೃಢೀಕೃತ ಪ್ರತಿಯನ್ನು ಲಗತ್ತಿಸಿ. | |
| 6. (ಅ) ಜನ್ಮಸ್ಥಳ, ಜಿಲ್ಲೆ ಮತ್ತು ರಾಜ್ಯ.<br>(ಆ) ಪ್ರಸ್ತುತ ನೆಲೆಸಿರುವ ಜಿಲ್ಲೆ | (ಅ)<br>(ಆ) |
| 7. (ಅ) ನಿಮ್ಮ ಮತ<br>(ಆ) ನೀವು ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ವರ್ಗಕ್ಕೆ ಸೇರಿದ್ದೀರಾ? ಹೌದು ಅಥವಾ ಇಲ್ಲ ಎಂದು ಉತ್ತರಿಸುವುದು. ಉತ್ತರ ಹೌದು ಆಗಿದ್ದರೆ, ನೀವು ಸೇರಿರುವ ಸಮುದಾಯವನ್ನು ಹೆಸರಿಸುವುದು | (ಅ)<br>(ಆ) |

8. ಎಸ್.ಎಸ್.ಎಲ್.ಸಿ.ಯಿಂದ ಮೊದಲ್ಗೊಂಡು ವಿದ್ಯಾರ್ಹತೆ - ವಿದ್ಯಾಭ್ಯಾಸದ ಸ್ಥಳ, ವರ್ಷ, ಶಾಲೆ/ಕಾಲೇಜಿನ ವಿವರಗಳೊಂದಿಗೆ. (ದೃಢೀಕರಿಸಿದ ಪದವಿ/ಡಿಪ್ಲೊಮಾ ಪ್ರಮಾಣಪತ್ರಗಳ ಪ್ರತಿ ಲಗತ್ತಿಸುವುದು).

| ಶಾಲೆ/ಕಾಲೇಜು ಮತ್ತು ವಿಶ್ವವಿದ್ಯಾಲಯಗಳ ಹೆಸರು ಮತ್ತು ಪೂರ್ಣ ವಿಳಾಸ | ಪ್ರವೇಶದ ದಿನಾಂಕ | ನಿರ್ಗಮನದ ದಿನಾಂಕ | ತೇರ್ಗಡೆಯಾದ ಪರೀಕ್ಷೆ/ಪದವಿ ಹೆಸರು |
|---|---|---|---|
| | | | |

9. ನೀವು ಯಾವಾಗಲಾದರೂ ಉದ್ಯೋಗದಲ್ಲಿದ್ದಿದ್ದರೆ, ವಿವರ ಒದಗಿಸಿ.

| ಹುದ್ದೆಯ ಪದನಾಮ ಅಥವಾ ಕೆಲಸದ ವಿವರಣೆ | ಅವಧಿ | | ಕಚೇರಿ/ಸಂಸ್ಥೆಯ ಪೂರ್ಣ ವಿಳಾಸ | ಉದ್ಯೋಗವನ್ನು ತ್ಯಜಿಸಲು ಕಾರಣಗಳು |
|---|---|---|---|---|
| | ಇಂದ (ದಿನಾಂಕ) | ವರೆಗೆ (ದಿನಾಂಕ) | | |
| | | | | |

| | |
|---|---|
| 10. ನಿಮ್ಮ ಕಾಲೇಜು ಅಥವಾ ವಿಶ್ವವಿದ್ಯಾಲಯಕ್ಕೆ ಸಂಬಂಧಿಸದ ಮತ್ತು ನಿಮಗೆ ಸಂಬಂಧಿಕರಲ್ಲದ, ಇಬ್ಬರು ಗೌರವಾನ್ವಿತ ವ್ಯಕ್ತಿಗಳಿಂದ ಪಡೆದ, ಚಾರಿತ್ರ್ಯ ಪ್ರಮಾಣಪತ್ರಗಳನ್ನು ಮೂಲ ಪ್ರತಿಯಲ್ಲಿ ಲಗತ್ತಿಸಿದ್ದೀರಾ? ಇಂತಹ ಪ್ರಮಾಣಪತ್ರ ಈ ಅರ್ಜಿಗೆ ಸಹಬಂಧಿಸಿರುವ ನಮೂನೆಯಲ್ಲಿ ಇರತಕ್ಕದ್ದು ಮತ್ತು ಅರ್ಜಿಯ ದಿನಾಂಕದ ಹಿಂದಿನ 6 ತಿಂಗಳ ಒಳಗೆ ಕೊಟ್ಟಂತಹ ಪ್ರಮಾಣಪತ್ರವಾಗಿರತಕ್ಕದ್ದು. | |
| 11. (ಅ) ನೀವು ಯಾವಾಗಲಾದರೂ ಅಭಿಯೋಜನೆಗೆ ಒಳಗಾಗಿದ್ದೀರಾ, ಬಂಧನಕ್ಕೆ ಒಳಗಾಗಿದ್ದೀರಾ ಅಥವಾ ಕಟ್ಟುಪಾಡಿಗೊಳಗಾಗಿದ್ದೀರಾ/ಜುಲ್ಮಾನೆಗೊಳಗಾಗಿದ್ದೀರಾ ಅಥವಾ ಯಾವುದೇ ನ್ಯಾಯಾಲಯದಿಂದ ಯಾವುದೇ ಅಪರಾಧಕ್ಕೆ ಅಪರಾಧಿಯೆಂದು ತೀರ್ಮಾನಿಸಲ್ಪಟ್ಟಿದ್ದೀರಾ?<br>(ಆ) ಈ ಅರ್ಜಿಯನ್ನು ಹಾಕುವ ಸಮಯದಲ್ಲಿ ನಿಮ್ಮ ವಿರುದ್ಧ ಯಾವುದೇ ನ್ಯಾಯಾಲಯದಲ್ಲಿ ಯಾವುದೇ ಪ್ರಕರಣ ಬಾಕಿ ಇದೆಯೇ? | (ಅ)<br>(ಆ) |

| | | |
|---|---|---|
| | (ಇ) ಮೇಲಿನ (ಅ) ಅಥವಾ/ಮತ್ತು (ಅ)ಗಳಿಗೆ ಯಾವುದಕ್ಕಾದರೂ ನಿಮ್ಮ ಉತ್ತರ ಹೌದು ಎಂದಾದರೆ, ಬಂಧನ/ಜುಲ್ಮಾನೆ, ಅಪರಾಧ ಸಿದ್ಧಿ, ದಂಡಾದೇಶ, ಮುಂತಾದ ವಿವರಗಳನ್ನು ಕೊಡುವುದು. | (ಇ) |
| 12. | (ಅ) ನಿಮ್ಮನ್ನು ಯಾವಾಗಲಾದರೂ ಸೇವೆಯಿಂದ ವಜಾ (dismiss) ಮಾಡಲಾಗಿದೆಯೇ/ತೆಗೆದು ಹಾಕಲಾಗಿದೆಯೇ (removed)/ಹೊರ ಹಾಕಲಾಗಿದೆಯೇ (terminated)/ ಕಡ್ಡಾಯವಾಗಿ ನಿವೃತ್ತಿಗೊಳಿಸಲಾಗಿದೆಯೇ ಅಥವಾ ಸರ್ಕಾರಿ ಸೇವೆಗೆ ಪ್ರವೇಶ ಪಡೆಯದಂತೆ ನಿರ್ಬಂಧಿಸಲಾಗಿದೆಯೇ (debarred)<br>(ಆ) ಉತ್ತರ 'ಹೌದು' ಆದರೆ, ಪ್ರಕರಣದ ಪೂರ್ಣ ವಿವರಗಳನ್ನು, ಸಂಬಂಧಪಟ್ಟ ದಾಖಲೆಗಳ ದೃಢೀಕೃತ ಪ್ರತಿಗಳೊಂದಿಗೆ ಒದಗಿಸತಕ್ಕದ್ದು. ದುರ್ನಡತೆಗಾಗಿ ಅಂತಹ ವ್ಯವಹರಣೆಯನ್ನು ನಿಮ್ಮ ವಿರುದ್ಧ ನಡೆಸಲಾಗಿದ್ದಲ್ಲಿ, ಅದನ್ನು ಸ್ಪಷ್ಟವಾಗಿ ತಿಳಿಸತಕ್ಕದ್ದು. | (ಅ)<br>(ಆ) |
| 13. | ಈ ಕೆಳಕಂಡ ದಾಖಲೆಗಳನ್ನು ಲಗತ್ತಿಸಲಾಗಿದೆಯೇ?<br>1) ವಯಸ್ಸನ್ನು ರುಜುವಾತುಪಡಿಸಲು ಜನ್ಮ ದಿನಾಂಕವನ್ನು ಒಳಗೊಂಡ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರದ ದೃಢೀಕೃತ ಪ್ರತಿ.<br>2) ಹುದ್ದೆಗೆ ಬೇಕಾದ ವಿದ್ಯಾರ್ಹತೆ/ಅನುಭವಕ್ಕೆ ಸಂಬಂಧಿಸಿದ ಪ್ರಮಾಣ ಪತ್ರಗಳ ದೃಢೀಕೃತ ಪ್ರತಿ. (ದಯವಿಟ್ಟು ಗ್ರಾಹಕ ಹಿತರಕ್ಷಣಾ ಅಧಿನಿಯಮ, 1986ರ ಸೆಕ್ಷನ್ 10/16ನ್ನು ನೋಡಿ). | |
| 14. | ಅರ್ಜಿದಾರರು ವಕೀಲರಾಗಿದ್ದಲ್ಲಿ, ಅಧ್ಯಕ್ಷರು/ಸದಸ್ಯರಾಗಿ ಅವರ ನೇಮಕಾತಿಯ ನಂತರ, ಅವರ ಕೇಂದ್ರ ಸ್ಥಳವಾಗಬಹುದಾದ ಸ್ಥಳದಲ್ಲಿ, ಅವರ ಸಂಬಂಧಿಕರು ಯಾರಾದರೂ ವಕೀಲಿ ವೃತ್ತಿ ನಡೆಸುತ್ತಿದ್ದಾರೆಯೇ? ಹಾಗಿದ್ದಲ್ಲಿ, ವಿವರಗಳನ್ನು ಒದಗಿಸುವುದು. | |
| 15. | ಅರ್ಜಿದಾರನ ಈಗಿನ ವಾರ್ಷಿಕ ವರಮಾನ-ವೃತ್ತಿ, ವ್ಯಾಪಾರ, ಕಸುಬು, ಉದ್ಯೋಗ, ವ್ಯವಹಾರ, ಆಸ್ತಿ ಬಾಡಿಗೆ/ಗುತ್ತಿಗೆ, ಮುಂತಾದವುಗಳಿಂದ ವಿವರಗಳನ್ನು ಒದಗಿಸುವುದು. | |
| 16. | ಅರ್ಥಶಾಸ್ತ್ರ, ಕಾನೂನು, ವಾಣಿಜ್ಯ, ಲೇಖಾಶಾಸ್ತ್ರ, ಕೈಗಾರಿಕೆ, ಸಾರ್ವಜನಿಕ ವ್ಯವಹಾರಗಳು ಅಥವಾ ಆಡಳಿತ, ಇವುಗಳಿಗೆ ಸಂಬಂಧಿಸಿದ ಸಮಸ್ಯೆಗಳನ್ನು ಬಗೆಹರಿಸುವಲ್ಲಿ ನಿಮಗೆ ಇರುವ ಜ್ಞಾನ ಮತ್ತು/ಅಥವಾ ಅನುಭವ/ ಸಾಮರ್ಥ್ಯ ವಿವರ ನೀಡುವುದು. (ಯಾವುದಾದರೂ ಇದ್ದಲ್ಲಿ, ದೃಢೀಕರಿಸಿದ ದಾಖಲೆಗಳ ಪ್ರತಿ ಒದಗಿಸುವುದು), (ದಯವಿಟ್ಟು ಗ್ರಾಹಕ ಸಂರಕ್ಷಣಾ ಅಧಿನಿಯಮ, 1986ರ ಕಲಂ 10/16ರನ್ನು ನೋಡಿ) | |

**ಸೂಚನೆ:** "ದೃಢೀಕೃತ ಪ್ರತಿ" ಎಂದರೆ ರಾಜ್ಯ ಅಥವಾ ಕೇಂದ್ರ ಸರ್ಕಾರದ ಪತ್ರಾಂಕಿತ ಅಧಿಕಾರಿ ಅಥವಾ ಸಾರ್ವಜನಿಕ ನೋಟರಿ "ಯಥಾಪ್ರತಿ" ಎಂದು ಅನುಪ್ರಮಾಣಿಸಿದ ಸಂಬಂಧಪಟ್ಟ ದಾಖಲೆಯ ಛಾಯಾಪ್ರತಿ.

**ಅರ್ಜಿದಾರರಿಂದ ಘೋಷಣೆ**

__________________________________________ ಎಂಬ ಹೆಸರಿನವನಾದ ನಾನು, ಮೇಲ್ಕಂಡ ಮಾಹಿತಿಯು, ನನ್ನ ಅತ್ಯುತ್ತಮ ಅರಿವು ಮತ್ತು ನಂಬಿಕೆಗಳಂತೆ, ಸರಿಯಾಗಿ ಹಾಗೂ ಸಂಪೂರ್ಣವಾಗಿರುವುದಾಗಿ ಈ ಮೂಲಕ ಘೋಷಿಸುತ್ತೇನೆ. ನೇಮಕಾತಿಗೆ ಯೋಗ್ಯತೆಯನ್ನು ದುರ್ಬಲಗೊಳಿಸುವ ಯಾವುದೇ ಸಂದರ್ಭಗಳು ನನಗೆ ತಿಳಿದಿರುವುದಿಲ್ಲ.

2. ನಾನು ಗ್ರಾಹಕ ಸಂರಕ್ಷಣಾ ಅಧಿನಿಯಮ, 1986 (ಕೇಂದ್ರ ಅಧಿನಿಯಮ ಸಂಖ್ಯೆ: 68/1986) ಮತ್ತು ಅದರಡಿ ರಚಿಸಲಾಗಿರುವ ರಾಜ್ಯ ಮತ್ತು ಕೇಂದ್ರದ ನಿಯಮಾವಳಿಗಳನ್ನು ಓದಿರುತ್ತೇನೆ. ಆ ಕಾನೂನುಗಳ ಅಡಿ ನಾನು *ಜಿಲ್ಲಾ ವೇದಿಕೆಯ/*ರಾಜ್ಯ ಆಯೋಗದ *ಅಧ್ಯಕ್ಷ/*ಸದಸ್ಯನಾಗಿ ನೇಮಕವಾಗಲು ಅರ್ಹತೆ ಹೊಂದಿರುವುದಾಗಿ ಘೋಷಿಸುತ್ತೇನೆ.

3. ನಾನು ಬಯಸುತ್ತಿರುವ ಸ್ಥಾನವು ಪೂರ್ಣಕಾಲಿಕ ಉದ್ಯೋಗ ಎಂಬುದನ್ನು ನಾನು ಅರಿತಿದ್ದೇನೆ. *ಅಧ್ಯಕ್ಷ/*ಸದಸ್ಯನಾಗಿ ನಾನು ನೇಮಕಗೊಂಡರೆ, ನನ್ನ ಪೂರ್ಣ ಕಾಲವನ್ನು ಅದಕ್ಕೆ ಸಮರ್ಪಿಸಲು ವಾಗ್ದಾನ ಮಾಡುತ್ತೇನೆ.

4. *ಅಧ್ಯಕ್ಷ/*ಸದಸ್ಯನಾಗಿ ನನ್ನ ಕಾರ್ಯಗಳ ಮೇಲೆ ಪ್ರತಿಕೂಲ ಪರಿಣಾಮ ಬೀರುವಂತಹ ಯಾವುದೇ ಹಣಕಾಸು ವ್ಯವಹಾರವನ್ನು ಅಥವಾ ಇತರ ಹಿತಾಸಕ್ತಿಯನ್ನು ನಾನು ಹೊಂದಿಲ್ಲ ಮತ್ತು ಹೊಂದುವುದಿಲ್ಲ.

*5. ನಾನು ವಕೀಲ ವೃತ್ತಿಯನ್ನು __________________________ ನಲ್ಲಿ (ಸ್ಥಳವನ್ನು ನಮೂದಿಸಬೇಕು) ನಡೆಸುತ್ತಿದ್ದು, ಈ ಅರ್ಜಿಯನ್ನು ಸಲ್ಲಿಸುತ್ತಿರುವ *ಅಧ್ಯಕ್ಷ/*ಸದಸ್ಯನಾಗಿ ಕಾರ್ಯನಿರ್ವಹಿಸುವ ಅವಧಿಗೆ, ಆ ವೃತ್ತಿಯನ್ನು ತ್ಯಜಿಸುತ್ತೇನೆ.

* ಅನ್ವಯಿಸದಿದ್ದಲ್ಲಿ ಹೊಡೆದುಹಾಕಿ.

ಸ್ಥಳ:

ದಿನಾಂಕ: ಅರ್ಜಿದಾರರ ಸಹಿ

**ಸಹಬಂಧ**

**ಚಾರಿತ್ರ್ಯ ಪ್ರಮಾಣ ಪತ್ರ**

ಶ್ರೀ ______________________________ ಇವರ ಮಗನಾದ/ಮಗಳಾದ/ಹೆಂಡತಿಯಾದ ಶ್ರೀ/ಶ್ರೀಮತಿ ______________________________________________ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ/ ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದ ಅಧ್ಯಕ್ಷ/ಸದಸ್ಯ ಹುದ್ದೆಗೆ ಅರ್ಜಿದಾರರಾಗಿದ್ದು, ಇವರು ನನಗೆ ಕಳೆದ ____________ ವರ್ಷ ಮತ್ತು ___________ ತಿಂಗಳಿನಿಂದ ಪರಿಚಿತರಾಗಿರುವರೆಂದು ದೃಢೀಕರಿಸಿದೆ. ಅರ್ಜಿದಾರರು ಒಳ್ಳೆಯ ನೈತಿಕ ಚಾರಿತ್ರ್ಯ ಮತ್ತು ಖ್ಯಾತಿಯನ್ನು ಹೊಂದಿದವರಾಗಿದ್ದಾರೆ. ಗ್ರಾಹಕ ರಕ್ಷಣಾ ಅಧಿನಿಯಮ, 1986 (ಕೇಂದ್ರ ಅಧಿನಿಯಮ 68/1986)ರ ಕಲಂ 10/16ನ್ನು ಓದಿದ ನಂತರ, ಅರ್ಜಿದಾರರು ಅಂತಹ ಅಧ್ಯಕ್ಷ/ಸದಸ್ಯತ್ವಕ್ಕೆ ನೇಮಕವಾಗಲು ಅನರ್ಹರಾಗುವಂತಹ ಯಾವುದೇ ಪೂರ್ವ ನಡತೆ ಹೊಂದಿಲ್ಲವೆಂದು ನಾನು ದೃಢೀಕರಿಸುತ್ತೇನೆ.

ಶ್ರೀ/ಶ್ರೀಮತಿ ______________________________ (ಅರ್ಜಿದಾರರ ಹೆಸರು) ನನಗೆ ಸಂಬಂಧಿಕರಲ್ಲ.

ಸ್ಥಳ: ಸಹಿ ಮತ್ತು ಹೆಸರು; ಮನೆಯ ಪೂರ್ಣ ವಿಳಾಸ ಮತ್ತು

ದಿನಾಂಕ: ಕಚೇರಿ/ವೃತ್ತಿಯ ಪೂರ್ಣ ವಿಳಾಸ ಹಾಗೂ ಮನೆಯ ಮತ್ತು ಕಚೇರಿಯ ದೂರವಾಣಿ ಸಂಖ್ಯೆ.

**APPLICATION FOR APPOINTMENT AS PRESIDENT/MEMBER OF __________________________ DISTRICT CONSUMER DISPUTES REDRESSAL FORUM/KARNATAKA STATE CONSUMER DISPUTES REDRESSAL COMMISSION**

**(To be filled in by the Candidate in his own handwriting)**

A. No. and Date of Notification of the State Commission calling for applications.

B. Date of Publication of the Notification in the Karnataka Gazette

C. Date of Publication of the Notification in daily newspapers (specify which newspaper, of which date; on which page; and in what columns)

AFFIX YOUR RECENT PASSPORT SIZE PHOTOGRAPH

| | | |
|---|---|---|
| 1. | Full name of the Applicant (in capitals) | ............................................................................ (Surname) (Name) |
| 2. | Have you ever changed your name; If so, please give details alongwith reasons therefor and attested copies of supporting documents. (If the space provided in this column is not sufficient, please use additional sheets) | |
| 3. | **ADDRESSES:** | |
| (a) | Present Residential Address with Telephone No., E-mail address, Fax No.: | (a) |

| | |
|---|---|
| (b) Are you employed or engaged in any profession. If yes, give complete details (Tel. No./E-Mail address/Fax No.) | (b) |
| 4. Father's/Husband 's<br>(a) Name in full<br>(b) Present residential postal address with Tel.No. (if dead, give last address)<br>(c) Profession, with address and Tel.No. | <br>(a)<br>(b)<br><br>(d) |
| 5. Date of birth (in Christian Era). Enclose an attested copy of the S.S.L.C. or Equivalent Examination Certificate containing Date of Birth in proof of age. | |
| 6. (a) Place of Birth, District and State<br>(b) District of present domicile | (a)<br>(b) |
| 7. (a) Your Religion<br>(b) Are you a member of a Scheduled Caste/ Scheduled Tribe? Answer yes or no (and if the answer is yes state the Community). | (a)<br>(b) |

8. Educational Qualification showing places of education with year in Schools and Colleges from SSLC level. (Attested copy of Degree/Diploma Certificate to be enclosed).

| Name of the School/College and University with full address | Date of Entry | Date of leaving | Name of the Examn./Degree passed |
|---|---|---|---|
| | | | |

9. If you have at any time been employed, give details.

| Designation of post held or Description of work | Period | | Full address of the Office, Firm or institution | Reasons for leaving the employment |
|---|---|---|---|---|
| | From (Date) | To (Date) | | |
| | | | | |

| | |
|---|---|
| 10. Have you furnished, in the form prescribed as per Appendix, in original, Character Certificates from two respectable persons unconnected with your College or University and not related to you, issued not more than 6 months prior to the date of this application. | |
| 11. (a) Have you ever been prosecuted, kept under detention or bound down/fined, convicted by a Court of Law for any offence.<br>(b) Is any case pending against you in any Court of Law at the time of filing this application? | (a)<br><br><br><br>(b) |

| | | |
|---|---|---|
| | (c) If the answer is yes for (a) and/or (b), full particulars of the case, detention, fine, conviction, sentence, stage of pendency, etc., should be given | (c) |
| 12. | (a) Have you ever been dismissed/removed, terminated/compulsorily retired, from service or debarred from entry into Government Service?<br>(b) If the answer is 'yes', full particulars of the case, alongwith attested copies of relevant documents, should be given. If such treatment has been meted out as a measure of penalty for misconduct, etc, that should be specified. | (a)<br>(b) |
| 13. | Whether the following documents are enclosed? Say yes or no, against each Item:<br>1) Attested copy of S.S.L.C. or equivalent examination certificate containing date of birth in proof of age. | |
| | 2) Attested copies of certificate in respect of the qualifications/ experience required for the post. (Please see Sections 10/16 of The Consumer Protection Act, 1986). | |
| 14. | If the applicant is an advocate, please give details of his/her relatives practising in the place, which would be his/her head quarters on appointment as President/Member. | |
| 15. | Present annual income of the Applicant from profession, trade, calling, employment, business, property rentals/lease, etc. Details to be furnished. | |
| 16. | Give details of your knowledge and/or experience/capacity in dealing with the problems relating to Economics, Law, Commerce, Accountancy, Industry, Public Affairs or Administration, (Please furnish attested copies of documents, if any) (please see Sections 10/16 of The Consumer Protection Act, 1986). | |

**N.B.:** "Attested Copy" means a photocopy of the relevant document, duly attested as "True Copy" by a Gazetted Officer of a State or Central Government or by a Notary Public.

## DECLARATION BY THE APPLICANT

I, ______________________________ (Name) hereby declare that, the foregoing information is correct and complete, to the best of my knowledge and belief. I am not aware of any circumstances, which might impair my fitness for appointment.

2. I have read The Consumer Protection Act, 1986 (Central Act No. 68/1986) and the State and Central Rules, framed thereunder and I declare that I am eligible for appointment as *President/*Member of a *District Forum/*State Commision under the provisions of those statutes.

3. I am aware that the position I am seeking involves full-time employment, and I undertake to devote my full-time, if appointed as *President/*Member.

4. I do not and will not have any financial dealings or other interest, which is likely to affect prejudicially my functions as *President/*Member.

*5. I am an advocate practising in______________ (indicate the place) and I shall give up practice, as long as I hold the office of President/Member, for which this application is being made.

* Strike out, if not applicable.

Place:

Date: **SIGNATURE OF THE APPLICANT**

## APPENDIX

## CERTIFICATE OF CHARACTER

Certified that I have known Sri/Smt______________________ son/daughter/wife of Sri ______________________ an applicant for the post of President/Member of the ______________ District Consumer Disputes Redressal Forum/Karnataka State Consumer Disputes Redressal Commission, for the past ________ years, __________ months. The applicant has good, moral character and reputation and that after having read the provisions of Section 10/16 of the Consumer Protection Act, 1986 (Central Act 68 of 1986), I certify that the applicant has no antecedents, which render him/her unsuitable for appointment as such President/Member.

Sri/Smt ____________________ (Name of the applicant) is not related to me.

PLACE: SIGNATURE WITH NAME IN CAPITALS;

DATE: FULL RESIDENTIAL AND OFFICIAL/PROFESSIONAL

PR-471 ADDRESS AND TEL. NO. OF RESIDENCE AND OFFICE.

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ ರವರ ಕಛೇರಿ ನಡವಳಿಗಳು**

**ಸಂಖ್ಯೆ: ಇಎಕ್ಸ್‌ಇ:3:ಡಿಟಿಸಿಆರ್‌ಎಂ:132/2003-04, ದಿನಾಂಕ: 4ನೇ ಫೆಬ್ರವರಿ 2005**

**ಉಪಸ್ಥಿತರು:** ಶ್ರೀ ಮಹಮದ್ ಇಲಿಯಾಸ್ ಅಹಮದ್,

ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ.

**ಫಿರ್ಯಾದುದಾರರು:** **ವಿರುದ್ಧ** **ಆರೋಪಿಗಳು:**

ಉಪ ನಿರೀಕ್ಷಕರು, ಉಪ ವಿಭಾಗ, ಮಡಿಕೇರಿ. ಎಂ.ಎ. ಹುಸೇನಾರ್.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 8.10.2003 ರಂದು ಮಡಿಕೇರಿ ಉಪ ವಿಭಾಗದ ಉಪ ನಿರೀಕ್ಷಕರು ತಮ್ಮ ಸಿಬ್ಬಂದಿಯ ಜೊತೆ ಮಡಿಕೇರಿ ತಾಲ್ಲೂಕಿನ ಬೇತ್ರಿ ಗ್ರಾಮದಲ್ಲಿ ರಸ್ತೆ ಪಹರೆ ವಾಹನ ತಪಾಸಣೆ ನಡೆಸಿರುತ್ತಾರೆ. ಸುಮಾರು ರಾತ್ರಿ 11.30 ಗಂಟೆ ಸಮಯದಲ್ಲಿ ವಿರಾಜಪೇಟೆ ಕಡೆಯಿಂದ ಮಡಿಕೇರಿ ಕಡೆಗೆ ಒಂದು ಜೀಪ್ ಸಂಖ್ಯೆ: ಕೆಎ-14-ಎಂ-1363 ಬರುತ್ತಿದ್ದುದನ್ನು ಕಂಡು ಅಕ್ರಮ ಮದ್ಯ ಸಾಗಾಟದ ಅನುಮಾನದ ಮೇಲೆ ತಡೆದು ನಿಲ್ಲಿಸಿ ವಾಹನದಲ್ಲಿದ್ದವರನ್ನು ಪ್ರಶ್ನಿಸಿರುತ್ತಾರೆ. ವಾಹನದಲ್ಲಿ ಸಾರಾಯಿ ಪ್ಯಾಕೇಟುಗಳಿದ್ದು, ಈ ಬಗ್ಗೆ ಯಾವುದೇ ದಾಖಲಾತಿಗಳು ಇರುವುದಿಲ್ಲ. ವಾಹನವನ್ನು ಪರಿಶೀಲಿಸಲಾಗಿ ಇದರ ಒಳಗಡೆ ನಾಲ್ಕು ಜನ ಇದ್ದು, ಮತ್ತು ಒಳಗಡೆ 9 ಪ್ಲಾಸ್ಟಿಕ್ ಚೀಲಗಳಲ್ಲಿ ತಲಾ 200 ಪ್ಯಾಕೇಟ್‌ನಂತೆ ಮತ್ತು ಒಂದು ಚೀಲದಲ್ಲಿ 150 ಸಾರಾಯಿ ಪ್ಯಾಕೇಟ್‌ನಂತೆ ಒಟ್ಟು 1950X100 ಎಂ.ಎಲ್. ಸಾರಾಯಿ ಪ್ಯಾಕೇಟ್‌ಗಳಿರುವುದು ಕಂಡುಬಂದಿರುತ್ತದೆ. ಅಕ್ರಮ ಸಾರಾಯಿ ಸಾಗಾಣಿಕೆ ಕೃತ್ಯವು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 11, 13(ಎ) (ಡಿ), 15/ಆರ್/ಡಬ್ಲ್ಯೂ, 32, 34, 38(ಎ) ಶಿಕ್ಷಾರ್ಹವಾದುದರಿಂದ ವಾಹನದಲ್ಲಿದ್ದ ನಾಲ್ಕು ಜನರನ್ನು ಬಂಧಿಸಿ ಮಹಜರು ನಡೆಸಿ ಮೊಕದ್ದಮೆ ಸಂಖ್ಯೆ: 19/2003-04 ರಂತೆ ಮೊಕದ್ದಮೆ ದಾಖಲು ಮಾಡಿಕೊಂಡು ಉಪ ನಿರೀಕ್ಷಕರು, ಮಡಿಕೇರಿ ಉಪ ವಲಯ ಇವರಿಗೆ ಹಸ್ತಾಂತರಿಸಿರುತ್ತಾರೆ.

ಸದರಿ ವಾಹನದ ಮಾಲೀಕರನ್ನು ಪತ್ತೆ ಹಚ್ಚಲು ದಿನಾಂಕ: 21.2.2004 ರಂದು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಕೊಡಗು ಜಿಲ್ಲೆ, ಮಡಿಕೇರಿ ರವರಿಗೆ ಪತ್ರ ಬರೆದು ಕೋರಲಾಗಿತ್ತು. ಅದರಂತೆ ದಿನಾಂಕ: 6.3.2004 ರಂದು ವಾಹನದ ಮಾಲೀಕರ ದೃಢೀಕರಣ ಪತ್ರ ನೀಡಿರುತ್ತಾರೆ. ಅದರಲ್ಲಿದ್ದಂತೆ ಶ್ರೀ ಹುಸೇನಾರ್, ತಂದೆ ಮಹಮದ್ ಕುಟ್ಟು, ಬಿಟ್ಟಂಗಾಲ ಗ್ರಾಮ ಮತ್ತು ಅಂಚೆ, ವಿರಾಜಪೇಟೆ ರವರು ವಾಹನದ ಈಗಿನ ಅಧಿಕೃತ

ಮಾಲೀಕರಾಗಿದ್ದು, ಅವರಿಗೆ ದಿನಾಂಕ: 17.12.2004 ರಂದು 43ಬಿ ರ ಪ್ರಕಾರ ಕಾರಣ ಕೇಳಿ ನೋಟೀಸನ್ನು ನೋಂದಣಿ ಅಂಚೆ ಮೂಲಕ ನೀಡಲಾಗಿರುತ್ತದೆ. ಪತ್ರ ಸ್ವೀಕೃತಿಯಾದ ಸ್ವೀಕೃತಿ ಪತ್ರ ಬಂದಿರುತ್ತದೆ. ಹಾಗೂ ಒಂದು ವಾರದೊಳಗೆ ಸೂಕ್ತ ಸಮಜಾಯಿಸಿಕೆ ಸಲ್ಲಿಸದಿದ್ದಲ್ಲಿ ಕಾನೂನು ಕ್ರಮ ಕೈಗೊಳ್ಳಲಾಗುವುದು ಎಂದು ಸೂಚನೆ ನೀಡಲಾಗಿತ್ತು.

ಆದರೆ ಕಾರಣ ಕೇಳಿ ನೋಟೀಸ್ ನೀಡಿ 3 ತಿಂಗಳು ಕಳೆದರೂ ಸಹಾ ವಾಹನದ ಮಾಲೀಕರಾದ ಹುಸೇನಾರ್‌ರವರಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ಪ್ರಾಧಿಕಾರಕ್ಕೆ ಹಾಜರಾಗಿರುವುದಿಲ್ಲ ಮತ್ತು ಅರ್ಜಿ ಸಲ್ಲಿಸಿರುವುದಿಲ್ಲ.

ಹಾಗೂ ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಸಾರಾಯಿಯನ್ನು ರಾಸಾಯನಿಕ ಪರೀಕ್ಷೆಗೆ ಕಳಿಸಲಾಗಿದ್ದು ಅವರ ವರದಿಯ ಪ್ರಕಾರ ಸಾರಾಯಿಯು ಸಾರಾಯಿ ಎಂದು ದೃಢಪಟ್ಟಿದ್ದು, ಸರ್ಕಾರಕ್ಕೆ ದಿನಾಂಕ: 22.1.2005 ರಂದು ಮುಟ್ಟುಗೋಲು ಹಾಕಿಕೊಳ್ಳಲಾಗಿರುತ್ತದೆ.

1965ನೇ ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಪ್ರಕರಣವನ್ನು ದಾಖಲುಪಡಿಸುವಾಗ ಅಪರಾಧಿಯು ಪತ್ತೆ ಆಗದಿದ್ದಲ್ಲಿ ಅಥವಾ ಪತ್ತೆಯಾಗುವ ಸಾಧ್ಯತೆಗಳು ಇಲ್ಲದಿದ್ದಲ್ಲಿ ಪ್ರಕರಣ ಪತ್ತೆ ಹಚ್ಚಿ ಒಂದು ತಿಂಗಳು ಅವಧಿಯಲ್ಲಿ ಯಾವುದೇ ವ್ಯಕ್ತಿಯು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸದರಿ ಸ್ವತ್ತುಗಳು ತಮ್ಮದೆಂದು ಅವುಗಳು ಕಾನೂನು ಬದ್ಧವಾಗಿದೆ ಎಂದು ಸಾಕ್ಷ್ಯಾಧಾರಗಳೊಂದಿಗೆ ಅರ್ಜಿಯನ್ನು ಸಲ್ಲಿಸದಿದ್ದಲ್ಲಿ ಸದರಿ ಸ್ವತ್ತುಗಳು ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಸ್ವತ್ತುಗಳಾಗಿದ್ದಲ್ಲಿ ಅಂತಹ ವಸ್ತುಗಳನ್ನು ಕಲಂ 43(ಸಿ)ರ ಅಡಿಯಲ್ಲಿ ಜಪ್ತುಪಡಿಸಿದ ಅಕ್ರಮ ಸಾರಾಯಿ ಪ್ಯಾಕೇಟುಗಳನ್ನು ಮತ್ತು ಅಕ್ರಮ ಸಾಗಾಣಿಕೆಗೆ ಬಳಸಲಾದ ವಾಹನವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ. ಹಾಗೂ ಸದರಿ ವಾಹನಕ್ಕೆ ಸಂಬಂಧಪಟ್ಟವರು ಪ್ರಾಧಿಕಾರಕ್ಕೆ ಇಲ್ಲಿಯವರೆಗೆ ಹಾಜರಾಗಿದ್ದ ಕಾರಣ ಅಬಕಾರಿ ಕಾನೂನನ್ನು ತಿಳಿದೇ ಈ ರೀತಿ ಅಕ್ರಮ ಸಾಗಾಣಿಕೆಯಲ್ಲಿ ತೊಡಗಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ.

ಈ ಎಲ್ಲಾ ಅಂಶಗಳನ್ನು ಪರಿಶೀಲಿಸಿದಾಗ ಈ ಪ್ರಾಧಿಕಾರದಲ್ಲಿ ಲಭ್ಯವಿರುವ ದಾಖಲಾತಿಗಳಿಂದ ಸ್ಥಳ ಮಹಜರು, ಪ್ರಥಮ ಮಾಹಿತಿ ವರದಿ, ರಾಸಾಯನಿಕ ತಜ್ಞರ ವರದಿ ಮುಂತಾದುವುಗಳನ್ನು ಪರಿಶೀಲನೆ ಮಾಡಿದಲ್ಲಿ ದಿನಾಂಕ: 8.10.2003 ರಂದು ಜೀಪ್ ಸಂಖ್ಯೆ: ಕೆಎ-13-ಎಂ-1363 ರಲ್ಲಿ ಆರೋಪಿಯು ಅಕ್ರಮವಾಗಿ 1950X100 ಎಂ.ಎಲ್. ಸಾರಾಯಿ ಪ್ಯಾಕೇಟುಗಳನ್ನು ಸಾಗಾಣಿಕೆ ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ. ಸ್ವತಃ ವಾಹನ ಮಾಲೀಕರೇ ಈ ಕಾನೂನು ಬಾಹಿರ ಕೃತ್ಯವನ್ನು ಎಸಗಿರುತ್ತಾರೆಂದು ಈ ಪ್ರಾಧಿಕಾರವು ತೀರ್ಮಾನಕ್ಕೆ ಬರಬೇಕಾಗಿರುತ್ತದೆ. ವಾಹನವನ್ನು ತೆರೆದ ಪ್ರದೇಶದಲ್ಲಿ ಅದು ಬಿಸಿಲು, ಮಳೆ, ಹವಾಮಾನ ವೈಪರೀತ್ಯಗಳಿಗೆ ವಾಹನವು ದಿನೇದಿನೇ ತನ್ನ ಗುಣಮಟ್ಟವನ್ನು ಕಳೆದುಕೊಳ್ಳುವ ಸಂಭವವಿದ್ದು, ಅದರ ಮೌಲ್ಯವು ಕಡಿಮೆಯಾಗುವ ಸಾಧ್ಯತೆ ಇರುವುದರಿಂದ ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಈ ಪ್ರಾಧಿಕಾರವು ತೀರ್ಮಾನಿಸಿ ಈ ಕೆಳಗಿನಂತೆ ಆದೇಶ.

**ಆದೇಶ ನಂ: ಇಎಕ್ಸ್‌ಇ:3:ಡಿಟಿಸಿಆರ್‌ಎಂ:132/2003-04, ದಿನಾಂಕ: 4ನೇ ಫೆಬ್ರವರಿ 2005**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳನ್ನು ಪರಿಶೀಲಿಸಲಾಗಿ ಮಹಮದ್ ಇಲಿಯಾಸ್ ಅಹಮದ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ ಆದ ನಾನು ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965ರ ಕಲಂ 43ಎ ರ ಅಡಿಯಲ್ಲಿ ಸರ್ಕಾರದಿಂದ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ಉಪ ನಿರೀಕ್ಷಕರು, ಉಪ ವಿಭಾಗ, ಮಡಿಕೇರಿ ರವರ ಮೊಕದ್ದಮೆ ಸಂಖ್ಯೆ: 19/2003-04, ದಿನಾಂಕ: 30.10.2003 ರಲ್ಲಿ ವಶಪಡಿಸಿಕೊಂಡ ಜೀಪ್ ಸಂಖ್ಯೆ: ಕೆಎ-13-ಎಂ-1363 ರನ್ನು ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 43(ಎ)(2) ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ: 4.2.2005 ರಂದು ಶೀಘ್ರಲಿಪಿಗಾರರಿಗೆ ಉಕ್ತಲೇಖನ ಕೊಟ್ಟು ಬೆರಳಚ್ಚು ಮಾಡಿಸಿ ಕಂಪ್ಯೂಟರಿನಲ್ಲಿ ಮುದ್ರಿಸಿ, ಪ್ರತಿಯನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶ ಆದ 30 ದಿನಗಳ ನಂತರ ಮುಟ್ಟುಗೋಲು ಹಾಕಿಕೊಂಡ ವಾಹನವನ್ನು ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ ರವರ ಅನುಮೋದನೆಯನ್ನು ಪಡೆದು ಬಹಿರಂಗ ಹರಾಜು ಮೂಲಕ ಕರ್ನಾಟಕ ರಾಜ್ಯ ಅಬಕಾರಿ (ಮುಟ್ಟುಗೋಲು ಹಾಕಿಕೊಂಡ ವಸ್ತುಗಳ ವಿಲೇವಾರಿ) 1697ರ ನಿಯಮದಂತೆ ವಿಲೇವಾರಿ ಮಾಡಲಾಗುವುದೆಂದು ಆದೇಶಿಸಿದೆ.

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್,
ಕೊಡಗು ಜಿಲ್ಲೆ, ಮಡಿಕೇರಿ.

ಪಿ.ಆರ್. 475

**ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಇಎಕ್ಸ್‌ಇ:3:ಡಿಟಿಸಿಆರ್‌ಎಂ:146/2001-02, ದಿನಾಂಕ: 16ನೇ ಫೆಬ್ರವರಿ 2005**

**ಉಪಸ್ಥಿತರು:** ಶ್ರೀ ಮಹಮದ್ ಇಲಿಯಾಸ್ ಅಹಮದ್,
ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ.

| **ಫಿರ್ಯಾದುದಾರರು:** | **ವಿರುದ್ಧ** | **ಆರೋಪಿಗಳು:** |
|---|---|---|
| ಅಬಕಾರಿ ಉಪ ನಿರೀಕ್ಷಕರು, | 1) | ಟಿ.ವೈ. ಉಸ್ಮಾನ್ ತಂದೆ ಯಾಸೂಫ್ |
| ಪೊನ್ನಂಪೇಟೆ ಉಪ ವಲಯ | 2) | ಬಿ. ತುಳಸಿ ರೈ, ತಂದೆ ಬಾಬು ರೈ |
| | 3) | ಎಸ್. ಕೃಷ್ಣ ತಂದೆ ಸುಬ್ಬಾಚಾರಿ. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 25.8.2001 ರಂದು ಪೊನ್ನಂಪೇಟೆ ಉಪ ವಲಯದ, ಉಪ ನಿರೀಕ್ಷಕರು ತಮ್ಮ ಸಿಬ್ಬಂದಿಯವರೊಂದಿಗೆ ಅರವತೋಕ್ಲು ಗ್ರಾಮದಲ್ಲಿ ಗಸ್ತು ನಡೆಸುತ್ತಿರುವಾಗ ಆಟೋರಿಕ್ಷಾದಲ್ಲಿ ಅಕ್ರಮವಾಗಿ ನಕಲಿ ಸಾರಾಯಿ ಪ್ಯಾಕೇಟ್‌ಗಳ ಸಾಗಾಣಿಕೆ ಎಂಬುದಾಗಿ ದೊರೆತ ಖಚಿತ ವರ್ತಮಾನದ ಮೇರೆಗೆ ಅರವತೋಕ್ಲು ಗ್ರಾಮದೊಳಗೆ ಹೋಗುವ ರಸ್ತೆಯಲ್ಲಿ ಸುಮಾರು ಸಾಯಂಕಾಲ 8.00 ಘಂಟೆ ಸಮಯಕ್ಕೆ ರಸ್ತೆ ಪಹರೆಯನ್ನು ನಡೆಸಿದಾಗ ಆಟೋರಿಕ್ಷಾ ನಂ.ಕೆಎ-12-5026 ಬರುತ್ತಿದ್ದು, ಅದನ್ನು ತಡೆದು ನಿಲ್ಲಿಸಿದಾಗ ಆಟೋರಿಕ್ಷಾದಲ್ಲಿ ಚಾಲಕನಲ್ಲದೇ ಹಿಂದಿನ ಸೀಟಿನಲ್ಲಿ ಇನ್ನಿಬ್ಬರು ಆಸಾಮಿಗಳು ಕುಳಿತಿದ್ದರು ನಂತರ ಆಟೋರಿಕ್ಷಾವನ್ನು ಪರಿಶೀಲಿಸಿದಾಗ ಒಂದು ಬಿಳಿ ಚೀಲ ಇದ್ದು, ಅದರಲ್ಲಿ100 ಎಂ.ಎಲ್.ನ 210 ನಕಲಿ ಸಾರಾಯಿ

ಪ್ಯಾಕೇಟ್‌ಗಳಿದ್ದು, ಇವುಗಳನ್ನು ಆಟೋರಿಕ್ಷಾದಲ್ಲಿ ಅಕ್ರಮವಾಗಿ ಸಾಗಾಣಿಕೆ ಮಾಡುತ್ತಿದ್ದರು. ಮೇಲ್ಕಂಡ ಸಾರಾಯಿ ಪ್ಯಾಕೇಟ್‌ಗಳನ್ನು ವಶಪಡಿಸಿಕೊಂಡು ಒಂದನೇ ಟಿ.ವೈ. ಉಸ್ಮಾನ್, ತಂದೆ ಯೂಸೂಫ್, ಎರಡನೇ ಬಿ. ತುಳಸಿ ರೈ, ತಂದೆ ಬಾಬು ರೈ, ಮೂರನೇ ಎಸ್. ಕೃಷ್ಣ, ತಂದೆ ಸುಬ್ಬಾಚಾರಿ ಎಂಬುವವರ ಮೇಲೆ ಪೊನ್ನಂಪೇಟೆ ಅಬಕಾರಿ ಉಪ ವಲಯದ ಅಬಕಾರಿ ಉಪ ನಿರೀಕ್ಷಕರು ತಮ್ಮ ಪ್ರಥಮ ವರ್ತಮಾನ ವರದಿ ಸಂಖ್ಯೆ: 1/01-03, ದಿನಾಂಕ: 25.8.2001 ರಂತೆ ಮೊಕದ್ದಮೆಯನ್ನು ದಾಖಲು ಮಾಡಿಕೊಂಡು ಆರೋಪಿಯನ್ನು ದಸ್ತಗಿರಿ ಮಾಡಿ ಆಟೋರಿಕ್ಷಾ ಮತ್ತು ನಕಲಿ ಸಾರಾಯಿ ಪ್ಯಾಕೇಟ್‌ಗಳನ್ನು ಸ್ವಾಧೀನಕ್ಕೆ ವಶಪಡಿಸಿಕೊಂಡಿರುತ್ತಾರೆ.

ಸದರಿ ಮೊಕದ್ದಮೆಯ ಬಗ್ಗೆ ದಿನಾಂಕ: 27.12.2001 ರಂದು ವಾಹನದ ಮಾಲೀಕರೆಂದು ಶ್ರೀ ಕೃಷ್ಣ, ತಂದೆ ಸುಬ್ಬಾಚಾರಿ, ಗರಿಕೆರೆ ಪೈಸಾರಿ, ಅರವತೋಕ್ಲು, ಗೋಣಿಕೊಪ್ಪ ರವರು ವಕೀಲರ ಮೂಲಕ ಅರ್ಜಿಯನ್ನು ಸಲ್ಲಿಸಿ ವಾಹನವನ್ನು ಮಧ್ಯಂತರ ಬಿಡುಗಡೆಗೆ ಕೋರಿರುತ್ತಾರೆ. ಸದರಿ ಅರ್ಜಿಯನ್ನು ಈ ಪ್ರಾಧಿಕಾರದಲ್ಲಿ ಪರಿಶೀಲಿಸಿ ವಾಹನದ ಮೌಲ್ಯವನ್ನು ನಿಗದಿಪಡಿಸುವಂತೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಕೊಡಗು ಜಿಲ್ಲೆ, ಮಡಿಕೇರಿ ರವರಿಗೆ ದಿನಾಂಕ: 16.2.2002 ರಂದು ಪತ್ರ ಬರೆಯಲಾಗಿತ್ತು. ಅದರಂತೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ದಿನಾಂಕ: 19.2.2002 ರಂದು ವಾಹನಕ್ಕೆ ರೂ.39,000/- ಬೆಲೆಯನ್ನು ನಿಗದಿಪಡಿಸಿ ದೃಢೀಕರಣ ಪತ್ರವನ್ನು ನೀಡಿರುತ್ತಾರೆ. ವಾಹನದ ಬೆಲೆ ಹೆಚ್ಚಾದ ಕಾರಣ ವಾಹನದ ಮಾಲೀಕರು ವಾಹನವನ್ನು ಪಡೆಯಲು ನಿರಾಕರಿಸಿರುತ್ತಾರೆ.

ತದ ನಂತರ ಸದರಿ ವಾಹನದ ಮೊಕದ್ದಮೆಯ ಬಗ್ಗೆ ಇಲಾಖೆಯಲ್ಲಿ ವಿಚಾರಣೆ ನಡೆಸಲು ವಾಹನದ ಮಾಲೀಕರೆಂದು ಅರ್ಜಿ ನೀಡಿದ ಶ್ರೀ ಕೃಷ್ಣರವರಿಗೂ ಅವರ ಪರ ವಕೀಲರಿಗೂ ನ್ಯಾಯಾಲಯಕ್ಕೆ ಹಾಜರಾಗುವಂತೆ ಸಮನ್ಸ್ ನೀಡಿದರೂ ಸಹ ಪ್ರಾಧಿಕಾರಕ್ಕೆ ಹಾಜರಾಗುತ್ತಿಲ್ಲ. ಹಾಗೂ ಇನ್ನು ಕೆಲವು ಸಮನ್ಸ್‌ಗಳು ನೋಂದಣಿ ಅಂಚೆಯ ಮೂಲಕ ಸ್ವೀಕೃತಿಯಾಗಿದ್ದರೂ ಸಹಾ ನ್ಯಾಯಾಲಯಕ್ಕೆ ಹಾಜರಾಗುತ್ತಿಲ್ಲ.

ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಸಾರಾಯಿ ಪ್ಯಾಕೇಟುಗಳು ರಾಸಾಯನಿಕ ತಜ್ಞರ ವರದಿಯ ಪ್ರಕಾರ ಸಾರಾಯಿ ಎಂದು ಸಾಬೀತಾಗಿರುವುದರಿಂದ ವಾಹನದ ಮಾಲೀಕರು ಕಾನೂನಿನ ಅರಿವಿದ್ದೇ ಈ ಅಪರಾಧ ಎಸಗಿರುವುದು ಸಾಬೀತಾಗಿರುತ್ತದೆ.

ಕೊನೆಯದಾಗಿ ದಿನಾಂಕ: 19.5.2004 ರಂದು ವಾಹನದ ಮಾಲೀಕರಿಗೆ ಕಾರಣ ಕೇಳಿಕೆ ನೋಟೀಸ್ ರೀತಿಯಲ್ಲಿ ತಿಳುವಳಿಕೆ ನೀಡಿ ನೋಟೀಸ್ ತಲುಪಿದ ಒಂದು ವಾರದೊಳಗೆ ಪ್ರಾಧಿಕಾರದಲ್ಲಿ ನಡೆಯುವ ನ್ಯಾಯಾಲಯಕ್ಕೆ ಹಾಜರಾಗದಿದ್ದಲ್ಲಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ ನೋಂದಣಿ ಅಂಚೆ ಮೂಲಕ ಪತ್ರ ನೀಡಿ ಪತ್ರ ತಲುಪಿದ ಬಗ್ಗೆ ಸ್ವೀಕೃತಿ ಬಂದಿರುತ್ತದೆ. ಆದರೂ ಇಲ್ಲಿಯವರೆಗೂ ವಾಹನದ ಮಾಲೀಕರಾಗಲೀ ಅವರ ಪರ ವಕೀಲರಾಗಲೀ ಪ್ರಾಧಿಕಾರಕ್ಕೆ ಹಾಜರಾಗಿರುವುದಿಲ್ಲ. ಆದುದರಿಂದ ವಾಹನವು ತೆರೆದ ಪ್ರದೇಶದಲ್ಲಿ ಹವಾಮಾನ ವೈಪರೀತ್ಯಕ್ಕೆ ತೀರಾ ಹಾಳಾಗಿದ್ದು, ಇನ್ನು ಹೆಚ್ಚು ಸಮಯ ಇಟ್ಟುಕೊಂಡಲ್ಲಿ ಸರ್ಕಾರಕ್ಕೆ ಬರುವ ಅಲ್ಪ ಆದಾಯವು ಕೈತಪ್ಪುವ ಸಾಧ್ಯತೆ ಇರುವುದರಿಂದ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಿ ಅದಕ್ಕೂ ಸಂಬಂಧಪಟ್ಟವರು ಬಾರದ ಕಾರಣ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಕೊನೆಯ ಹಂತವಾಗಿರುತ್ತದೆ. ಹಾಗೂ ಅಬಕಾರಿ ಉಪ ನಿರೀಕ್ಷಕರು, ಪೊನ್ನಂಪೇಟೆ ಉಪ ವಲಯ ಹಾಗೂ ಅಬಕಾರಿ ನಿರೀಕ್ಷಕರು, ವಿರಾಜಪೇಟೆ ವಲಯ ರವರ ವರದಿಯ ಪ್ರಕಾರ ವಾಹನ ಸಂಖ್ಯೆ: ಆಟೋರಿಕ್ಷಾ ನಂ.ಕೆಎ-12-5026 ರನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ. ಆದುದರಿಂದ ಈ ಕೆಳಗಿನಂತೆ ಆದೇಶ.

**ಆದೇಶ ನಂ: ಇಎಕ್ಸ್‌ಇ:3:ಡಿಟಿಸಿಆರ್‌ಎಂ:146/2001-02, ದಿನಾಂಕ: 16ನೇ ಫೆಬ್ರವರಿ 2005**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳನ್ನು ಪರಿಶೀಲಿಸಲಾಗಿ ಮಹಮದ್ ಇಲಿಯಾಸ್ ಅಹಮದ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ ಆದ ನಾನು ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965ರ ಕಲಂ 43ಎ ರ ಅಡಿಯಲ್ಲಿ ಸರ್ಕಾರದಿಂದ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ಉಪ ನಿರೀಕ್ಷಕರು, ಪೊನ್ನಂಪೇಟೆ ಉಪ ವಲಯ ರವರ ಮೊಕದ್ದಮೆ ಸಂಖ್ಯೆ: 1/2001-02, ದಿನಾಂಕ: 25.8.2001 ರಲ್ಲಿ ವಶಪಡಿಸಿಕೊಂಡ ಆಟೋರಿಕ್ಷಾ ನಂ. ಕೆಎ-12-5026 ರನ್ನು ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 43(ಎ)(2) ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ: 16.2.2005 ರಂದು ಶೀಘ್ರಲಿಪಿಗಾರರಿಗೆ ಉಕ್ತಲೇಖನ ಕೊಟ್ಟು ಬೆರಳಚ್ಚು ಮಾಡಿಸಿ ಕಂಪ್ಯೂಟರಿನಲ್ಲಿ ಮುದ್ರಿಸಿ, ಪ್ರತಿಯನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶ ಆದ 30 ದಿನಗಳ ನಂತರ ಮುಟ್ಟುಗೋಲು ಹಾಕಿಕೊಂಡ ವಾಹನವನ್ನು ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ ರವರ ಅನುಮೋದನೆಯನ್ನು ಪಡೆದು ಬಹಿರಂಗ ಹರಾಜು ಮೂಲಕ ಕರ್ನಾಟಕ ರಾಜ್ಯ ಅಬಕಾರಿ (ಮುಟ್ಟುಗೋಲು ಹಾಕಿಕೊಂಡ ವಸ್ತುಗಳ ವಿಲೇವಾರಿ) 1967ರ ನಿಯಮದಂತೆ ವಿಲೇವಾರಿ ಮಾಡಲಾಗುವುದೆಂದು ಆದೇಶಿಸಿದೆ.

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್,
ಪಿ.ಆರ್. 476 ಕೊಡಗು ಜಿಲ್ಲೆ, ಮಡಿಕೇರಿ.

**ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಇಎಕ್ಸ್‌ಇ:3:ಡಿಟಿಸಿಆರ್‌ಎಂ:278/2002-03, ದಿನಾಂಕ: 15ನೇ ಫೆಬ್ರವರಿ 2005**

**ಉಪಸ್ಥಿತರು:** ಶ್ರೀ ಮಹಮದ್ ಇಲಿಯಾಸ್ ಅಹಮದ್,

ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ.

| **ಫಿರ್ಯಾದುದಾರರು:** | **ವಿರುದ್ಧ** | **ಆರೋಪಿಗಳು:** |
|---|---|---|
| ಅಬಕಾರಿ ಉಪ ನಿರೀಕ್ಷಕರು, | | ಮಲೆಯಾಳಿ ಅಶ್ವಥ್, ತಂದೆ ಜಯಾನಂದ |
| ವಿರಾಜಪೇಟೆ ಸಂಚಾರಿದಳ | | ಕುಶಾಲನಗರ, ಜನತಾ ಕಾಲೋನಿ. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 29.10.2002 ರಂದು ಕರ್ತವ್ಯದ ಮೇಲೆ ವಿರಾಜಪೇಟೆ ತಾಲ್ಲೂಕು, ಹರಿಹರ ಗ್ರಾಮದ ಕಡೆಗೆ ಹೋಗಿದ್ದ ಸಂದರ್ಭದಲ್ಲಿ ದೊರೆತ ಖಚಿತ ವರ್ತಮಾನದ ಮೇರೆಗೆ ಹರಿಹರ ಗ್ರಾಮದಲ್ಲಿ ಬೆಳ್ಳೂರು ರಸ್ತೆಯ ಕಡೆಯಿಂದ ಒಂದು ವಾಹನ ಅಂಬಾಸಿಡರ್ ಕಾರ್ ಬರುತ್ತಿದ್ದು, ಇದರ ನಂ.

ಎಂ.ಇ.ಜಿ.-1854 ರನ್ನು ತಡೆದು ನಿಲ್ಲಿಸಿ ವಾಹನವನ್ನು ಚಾಲನೆ ಮಾಡುತ್ತಿದ್ದವನನ್ನು ಕಾರಿನ ಒಳಗಡೆ ಏನಿದೆ ಎಂದು ಕೇಳಲಾಗಿ, ಸಾರಾಯಿ ಪ್ಯಾಕೇಟು ಎಂದು ತಿಳಿಸಿದನು. ಸ್ಥಳದಲ್ಲಿಯೇ ಇದ್ದ ಇಬ್ಬರನ್ನು ಪಂಚಾಯಿತಿದಾರರನ್ನಾಗಿ ಮಾಡಿಕೊಂಡು ಕಾರನ್ನು ಪರಿಶೀಲಿಸಲಾಯಿತು. ಕಾರಿನ ಒಳಭಾಗದಲ್ಲಿ ಹಿಂದಿನ ಸೀಟಿನಲ್ಲಿ ಒಂದು ಪ್ಲಾಸ್ಟಿಕ್ ಗೋಣಿಚೀಲವಿದ್ದು, ಇದರ ಒಳಭಾಗದಲ್ಲಿ ನೋಡಿದಾಗ ಸರ್ಕಾರಿ ಸಾರಾಯಿ ಇರುವುದು ಕಂಡು ಬಂದಿದ್ದು, ಚೀಲವನ್ನು ಬಿಚ್ಚಿ ಸಾರಾಯಿ ಪ್ಯಾಕೇಟುಗಳನ್ನು ಎಣಿಸಿ ನೋಡಲಾಗಿ 300X100 ಎಂ.ಎಲ್.ನ ಸಾರಾಯಿ ಪ್ಯಾಕೇಟುಗಳಿದ್ದು, ಇದರ ಮೇಲೆ ಮೈಷುಗರ್ ಕಂ. ಲಿ. ಕೊಡಗು ಜಿಲ್ಲೆ ಎಂದು ಕೆಂಪು ಅಕ್ಷರಗಳಿಂದ ಬರೆದಿತ್ತು. ಇವುಗಳನ್ನು ಸಾಗಿಸಲು ರಹದಾರಿ ಪತ್ರಗಳಿವೆಯೇ ಎಂದು ವಾಹನದ ಚಾಲಕನನ್ನು ಕೇಳಲಾಗಿ ಯಾವುದೂ ಇಲ್ಲವೆಂದು ತಿಳಿಸಿದ ಮೇಲೆ ವಾಹನದ ಚಾಲಕನಾದ ಮಲೆಯಾಳಿ ಅಶ್ವಥ್, ತಂದೆ ಜಯಾನಂದ, ಜನತಾ ಕಾಲೋನಿ, ಕುಶಾಲನಗರ ಎಂದು ತಿಳಿಸಿರುವನು. ಸದರಿ ಸಾರಾಯಿ ಪ್ಯಾಕೇಟುಗಳನ್ನು ಸಾಗಿಸಲು ಸರ್ಕಾರದ ಪರವಾನಿಗೆ ಇಲ್ಲದ ಕಾರಣ ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ವಾಹನ ಅಂಬಾಸಿಡರ್ ಕಾರ್ ನಂ: ಎಂ.ಇ.ಜಿ.-1854 ರನ್ನು ಮಾಲು ಸಮೇತ ವಶಪಡಿಸಿಕೊಂಡು ಮೊಕದ್ದಮೆ ಸಂಖ್ಯೆ: 35/2002-03, ದಿನಾಂಕ: 29.10.2002 ರಂತೆ ಮೊಕದ್ದಮೆಯನ್ನು ದಾಖಲು ಮಾಡಿಕೊಂಡು ಉಪ ನಿರೀಕ್ಷಕರು, ಉಪ ವಲಯ, ವಿರಾಜಪೇಟೆ ಇವರಿಗೆ ಹಸ್ತಾಂತರಿಸಿರುತ್ತಾರೆ.

ಸದರಿ ವಾಹನದ ಮಾಲೀಕತ್ವವನ್ನು ಪತ್ತೆ ಹಚ್ಚಲು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಮಂಗಳೂರು ರವರಿಗೆ ದಿನಾಂಕ: 22.10.2003 ರಂದು ಪತ್ರ ಬರೆಯಲಾಗಿದ್ದು, ಅವರಿಂದ ಇಲ್ಲಿಯವರೆಗೆ ಯಾವುದೇ ಉತ್ತರ ಬಂದಿರುವುದಿಲ್ಲ. ಹಾಗೂ ದೂರವಾಣಿ ಮೂಲಕವೂ ಸಹಾ ತಮ್ಮ ಕಛೇರಿಯಲ್ಲಿ ನೋಂದಣಿ ಆಗಿದ್ದಲ್ಲಿ ಕೂಡಲೇ ವಾಹನದ ಮಾಲೀಕತ್ವದ ದೃಢೀಕರಣ ಪತ್ರವನ್ನು ಕಳಿಸಿಕೊಡುವಂತೆ ಕೋರಿದರೂ ಸಹಾ ಈ ವರೆಗೂ ಬಂದಿರುವುದಿಲ್ಲ. ಹಾಗೂ ಸಾರ್ವಜನಿಕರಿಗೆ ತಿಳಿಯಪಡಿಸುವಂತೆ ದಿನಾಂಕ: 19.8.2004ರ ಪತ್ರದಲ್ಲಿ ಪ್ರಕಟಿಸಲಾಯಿತು. ಆದರೆ ಇಂದಿನವರೆಗೂ ವಾಹನದ ಮಾಲೀಕರಾಗಲೀ ಅವರ ಪರ ವಕೀಲರಾಗಲೀ ಪ್ರಾಧಿಕಾರಕ್ಕೆ ಹಾಜರಾಗಿ ಅರ್ಜಿ ನೀಡಿರುವುದಿಲ್ಲ.

ವಾಹನದ ಎದುರು ಮೊಕದ್ದಮೆ ದಾಖಲಾಗಿ ಎರಡು ವರ್ಷಗಳು ಕಳೆದರೂ ಸೂಕ್ತ ಸಾಕ್ಷ್ಯಾಧಾರಗಳೊಂದಿಗೆ ವಾಹನದ ಮಾಲೀಕರು ಪ್ರಾಧಿಕಾರಕ್ಕೆ ಹಾಜರಾಗಿ ಅರ್ಜಿ ಸಲ್ಲಿಸದಿದ್ದ ಕಾರಣ ವಾಹನದ ಮಾಲೀಕರು ಕಾನೂನಿನ ಅರಿವಿದ್ದೇ ಅಕ್ರಮ ಸಾಗಾಣಿಕೆಯಲ್ಲಿ ತೊಡಗಿರುವುದು ಈ ಪ್ರಾಧಿಕಾರದಲ್ಲಿ ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ.

ಆದುದರಿಂದ 1965ನೇ ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಪ್ರಕರಣವನ್ನು ದಾಖಲು ಪಡಿಸುವಾಗ ಅಪರಾಧಿಯು ಪತ್ತೆ ಆಗದಿದ್ದಲ್ಲಿ ಅಥವಾ ಪತ್ತೆಯಾಗುವ ಸಾಧ್ಯತೆಗಳು ಇಲ್ಲದಿದ್ದಲ್ಲಿ ಪ್ರಕರಣ ಪತ್ತೆ ಹಚ್ಚಿ ಒಂದು ತಿಂಗಳು ಅವಧಿಯಲ್ಲಿ ಯಾವುದೇ ವ್ಯಕ್ತಿಯು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸದರಿ ಸ್ವತ್ತುಗಳು ತಮ್ಮದೆಂದು ಅವುಗಳು ಕಾನೂನು ಬದ್ಧವಾಗಿದೆ ಎಂದು ಸಾಕ್ಷ್ಯಾಧಾರಗಳೊಂದಿಗೆ ಅರ್ಜಿಯನ್ನು ಸಲ್ಲಿಸದಿದ್ದಲ್ಲಿ ಸದರಿ ಸ್ವತ್ತುಗಳು ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಸ್ವತ್ತುಗಳಾಗಿದ್ದಲ್ಲಿ ಅಂತಹ ವಸ್ತುಗಳನ್ನು ಕಲಂ 43(ಸಿ)ರ ಅಡಿಯಲ್ಲಿ ಜಪ್ತುಪಡಿಸಿದ ಅಕ್ರಮ ಮದ್ಯಸಾರ ಮತ್ತು ಅಕ್ರಮ ಸಾಗಾಣಿಕೆಗೆ ಬಳಸಲಾದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ. ಹಾಗೂ ಸದರಿ ವಾಹನಕ್ಕೆ ಸಂಬಂಧಪಟ್ಟವರು ಪ್ರಾಧಿಕಾರಕ್ಕೆ ಇಲ್ಲಿಯವರೆಗೆ ಹಾಜರಾಗದಿದ್ದ ಕಾರಣ ಅಬಕಾರಿ ಕಾನೂನನ್ನು ತಿಳಿದೇ ಈ ರೀತಿ ಅಕ್ರಮ ಸಾಗಾಣಿಕೆಯಲ್ಲಿ ತೊಡಗಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ.

ಈ ಎಲ್ಲಾ ಅಂಶಗಳನ್ನು ಪರಿಶೀಲಿಸಿದಾಗ ಈ ಪ್ರಾಧಿಕಾರದಲ್ಲಿ ಲಭ್ಯವಿರುವ ದಾಖಲಾತಿಗಳಿಂದ ಪ್ರಥಮ ಮಾಹಿತಿ ವರದಿ, ಹಾಗೂ ಅಬಕಾರಿ ಉಪ ನಿರೀಕ್ಷಕರು, ಸಂಚಾರಿದಳ, ವಿರಾಜಪೇಟೆ ರವರ ವರದಿಯಂತೆ ಪರಿಶೀಲನೆ ಮಾಡಿದಲ್ಲಿ ಅಂಬಾಸಿಡರ್ ಕಾರ್ ನಂ: ಎಂ.ಇ.ಜಿ.-1854 ರಲ್ಲಿನ ಆರೋಪಿಯು ಅಕ್ರಮವಾಗಿ 300X100 ಎಂ.ಎಲ್.ನ ಸಾರಾಯಿ ಪ್ಯಾಕೇಟುಗಳನ್ನು ಸಾಗಾಣಿಕೆ ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ. ಸ್ವತಃ ವಾಹನ ಮಾಲೀಕರೇ ಈ ಕಾನೂನು ಬಾಹಿರ ಕೃತ್ಯವನ್ನು ಎಸಗಿರುತ್ತಾರೆಂದು ಈ ಪ್ರಾಧಿಕಾರವು ತೀರ್ಮಾನಕ್ಕೆ ಬರಬೇಕಾಗಿರುತ್ತದೆ. ವಾಹನವನ್ನು ತೆರೆದ ಪ್ರದೇಶದಲ್ಲಿ ಅದು ಬಿಸಿಲು, ಮಳೆ, ಹವಾಮಾನ ವೈಪರೀತ್ಯಗಳಿಗೆ ವಾಹನವು ದಿನೇದಿನೇ ತನ್ನ ಗುಣಮಟ್ಟವನ್ನು ಕಳೆದುಕೊಳ್ಳುವ ಸಂಭವವಿದ್ದು, ಅದರ ಮೌಲ್ಯವು ಕಡಿಮೆಯಾಗುವ ಸಾಧ್ಯತೆ ಇರುವುದರಿಂದ ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಅಂಬಾಸಿಡರ್ ಕಾರ್ ನಂ ಎಂ.ಇ.ಜಿ-1854 ರನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಈ ಪ್ರಾಧಿಕಾರವು ತೀರ್ಮಾನಿಸಿ ಈ ಕೆಳಗಿನಂತೆ ಆದೇಶ.

**ಆದೇಶ ನಂ: ಇಎಕ್ಸ್‌ಇ:3:ಡಿಟಿಸಿಆರ್‌ಎಂ:278/2002-03, ದಿನಾಂಕ: 15ನೇ ಫೆಬ್ರವರಿ 2005**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳನ್ನು ಪರಿಶೀಲಿಸಲಾಗಿ ಮಹಮದ್ ಇಲಿಯಾಸ್ ಅಹಮದ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ ಆದ ನಾನು ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965ರ ಕಲಂ 43ಎ ರ ಅಡಿಯಲ್ಲಿ ಸರ್ಕಾರದಿಂದ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ಉಪ ನಿರೀಕ್ಷಕರು, ಸಂಚಾರಿದಳ, ವಿರಾಜಪೇಟೆರವರ ಮೊಕದ್ದಮೆ ಸಂಖ್ಯೆ: 35/2002-03, ದಿನಾಂಕ: 29.10.2002 ರಲ್ಲಿ ವಶಪಡಿಸಿಕೊಂಡ ಅಂಬಾಸಿಡರ್ ಕಾರ್ ನಂ. ಎಂ.ಇ.ಜಿ-1854 ರನ್ನು ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 43(ಎ)(2) ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ: 15.2.2005 ರಂದು ಶೀಘ್ರಲಿಪಿಗಾರರಿಗೆ ಉಕ್ತಲೇಖನ ಕೊಟ್ಟು ಬೆರಳಚ್ಚು ಮಾಡಿಸಿ ಕಂಪ್ಯೂಟರಿನಲ್ಲಿ ಮುದ್ರಿಸಿ, ಪ್ರತಿಯನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶ ಆದ 30 ದಿನಗಳ ನಂತರ ಮುಟ್ಟುಗೋಲು ಹಾಕಿಕೊಂಡ ವಾಹನವನ್ನು ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ ರವರ ಅನುಮೋದನೆಯನ್ನು ಪಡೆದು ಬಹಿರಂಗ ಹರಾಜು ಮೂಲಕ ಕರ್ನಾಟಕ ರಾಜ್ಯ ಅಬಕಾರಿ (ಮುಟ್ಟುಗೋಲು ಹಾಕಿಕೊಂಡ ವಸ್ತುಗಳ ವಿಲೇವಾರಿ) 1967ರ ನಿಯಮದಂತೆ ವಿಲೇವಾರಿ ಮಾಡಲಾಗುವುದೆಂದು ಆದೇಶಿಸಿದೆ.

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್,
ಕೊಡಗು ಜಿಲ್ಲೆ, ಮಡಿಕೇರಿ.

ಪಿ.ಆರ್. 477

**ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಇಎಕ್ಸ್‌ಇ:3:ಡಿಟಿಸಿಆರ್‌ಎಂ:65/1999-2000, ದಿನಾಂಕ: 4ನೇ ಮಾರ್ಚ್ 2005**

**ಉಪಸ್ಥಿತರು:** ಶ್ರೀ ಮಹಮದ್ ಇಲಿಯಾಸ್ ಅಹಮದ್,

ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ.

| **ಫಿರ್ಯಾದುದಾರರು:** | **ವಿರುದ್ಧ** | **ಆರೋಪಿಗಳು:** |
|---|---|---|
| ಅಬಕಾರಿ ಉಪ ನಿರೀಕ್ಷಕರು,<br>ಸಂಚಾರಿದಳ, ವಿರಾಜಪೇಟೆ. | | ಅಶ್ವಥ್ ಮತ್ತು ಇತರರು |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 25.1.2000 ರಂದು ವಿರಾಜಪೇಟೆ ಸಂಚಾರಿದಳದ ಅಬಕಾರಿ ಉಪ ನಿರೀಕ್ಷಕರು ತಮ್ಮ ಸಿಬ್ಬಂದಿಯವರೊಂದಿಗೆ ಇಲಾಖಾ ಜೀಪಿನಲ್ಲಿ ಅಬಕಾರಿ ಗಸ್ತು ನಡೆಸುತ್ತಿದ್ದಾಗ ವಿರಾಜಪೇಟೆ ಕೊಡವ ಸಮಾಜದ ಕಡೆಯಿಂದ ಒಂದು ಆಟೋರಿಕ್ಷಾ ನಂ. ಕೆಎ-12-1752 ಬರುತ್ತಿದ್ದು, ಅದರಲ್ಲಿ ಚಾಲಕ ಮತ್ತು ಇನ್ನೊಬ್ಬ ಆಸಾಮಿ ಇದ್ದು, ಹಿಂದುಗಡೆ ಕುಳಿತಿದ್ದವನ ಕಾಲಿನ ಹತ್ತಿರ ಎರಡು ರಟ್ಟಿನ ಪೆಟ್ಟಿಗೆಗಳು ಕಂಡು ಬಂದು ಸಂಶಯದಿಂದ ಆಟೋ ರಿಕ್ಷಾವನ್ನು ತಡೆದು ನಿಲ್ಲಿಸಿ ಪರಿಶೀಲಿಸಿದಾಗ ಒಂದು ರಟ್ಟಿ ಪೆಟ್ಟಿಗೆಯಲ್ಲಿ ತಲಾ 180 ಎಂ.ಎಲ್.ನ 48 ಬಾಟಲಿಗಳಂತೆ ಒಟ್ಟು 96X180 ಎಂ.ಎಲ್. ಎ.ಜೆ.ಬ್ರಾಂಡಿ ಬಾಟಲಿಗಳಿರುವುದು ಕಂಡು ಬಂದ ಪ್ರಯುಕ್ತ ಅವುಗಳನ್ನು ಆಟೋರಿಕ್ಷಾದಲ್ಲಿ ಸಾಗಾಣೆ ಮಾಡಲು ರಹದಾರಿ ಪತ್ರ ವಗ್ಯೆರೆ ಕೇಳಲಾಗಿ ಯಾವುದೂ ಹಾಜರು ಪಡಿಸದ ಕಾರಣ ಒಂದನೇ ನಜೀರ್, ತಂದೆ ಪಕ್ರುದ್ದೀನ್, ಎರಡನೇ ಅಶ್ವಥ್, ತಂದೆ ತಮ್ಮಯ್ಯ ಎಂಬುವವರ ವಿರುದ್ಧ ವಿರಾಜಪೇಟೆ ಸಂಚಾರಿದಳದ ಅಬಕಾರಿ ಉಪ ನಿರೀಕ್ಷಕರು ಪ್ರಥಮ ವ.ಸಂ:28/99-2000, ದಿನಾಂಕ: 25.1.2000 ರಲ್ಲಿ ಮೊಕದ್ದಮೆಯನ್ನು ದಾಖಲು ಮಾಡಿಕೊಂಡು ನಿಯಮ 43ಎ ರ ಪ್ರಕಾರ ಮುಂದಿನ ಸೂಕ್ತ ಕ್ರಮಕ್ಕಾಗಿ ವರದಿ ಸಲ್ಲಿಸಿರುತ್ತಾರೆ.

ದಿನಾಂಕ: 28.1.2000 ರಂದು ವಾಹನದ ಮಾಲೀಕರಾದ ಶ್ರೀ ತಸ್ಲೀಂ, ತಂದೆ ಜಹಿರುದ್ದೀನ್ ಮೇಜರ್, ಶೂ ಸೆಂಟರ್, ಮೂರ್ನಾಡ್ ರೋಡ್, ವಿರಾಜಪೇಟೆ ರವರ ಅಧಿಕೃತ ಹಕ್ಕುಪತ್ರ ಪಡೆದವರಾದ ಶ್ರೀ ಎಂ.ಎಫ್. ನಸೀರ್, ತಂದೆ ಫಕ್ರುದ್ದೀನ್, ಕೊಟ್ಟೋಳಿ ಗ್ರಾಮ, ವಿರಾಜಪೇಟೆ ತಾಲ್ಲೂಕು ರವರು ಅವರ ಪರ ವಕೀಲರ ಮೂಲಕ ಅರ್ಜಿಯನ್ನು ಸಲ್ಲಿಸಿ, ಸದರಿ ವಾಹನದ ಅಧಿಕೃತ ಮಾಲೀಕನಾಗಿದ್ದು, ಆಟೋರಿಕ್ಷಾ ಬಾಡಿಗೆ ಓಡಿಸಿ ಬಂದ ಹಣದಿಂದ ಸಂಸಾರವನ್ನು ಸಾಗಿಸಬೇಕಾಗಿರುತ್ತದೆ. ಅಬಕಾರಿ ಕಾನೂನಿನ ಅರಿವಿಲ್ಲದೇ ಈ ತಪ್ಪು ನಡೆದಿರುತ್ತದೆ. ಆದ್ದರಿಂದ ಸದರಿ ವಾಹನವನ್ನು ಬ್ಯಾಂಕ್ ಗ್ಯಾರಂಟಿ ಮೂಲಕ ಮಧ್ಯಂತರ ಬಿಡುಗಡೆಗೊಳಿಸಿಕೊಡಬೇಕಾಗಿ ಕೋರಿಕೊಂಡಿರುತ್ತಾರೆ.

ವಾಹನದ ಮಾಲೀಕರು ಅರ್ಜಿಯೊಂದಿಗೆ ಸಲ್ಲಿಸಿದ ಆರ್.ಸಿ. ಪುಸ್ತಕದ ಪ್ರಕಾರ ಶ್ರೀ ತಸ್ಲೀಂ, ತಂದೆ ಜಹಿರುದ್ದೀನ್ ಮೇಜರ್, ಶೂ ಸೆಂಟರ್, ಮೂರ್ನಾಡ್ ರೋಡ್, ವಿರಾಜಪೇಟೆ ರವರಿಗೆ 43ಬಿ ರ ಅಡಿಯಲ್ಲಿ ಕಾರಣ ಕೇಳಿಕೆ ನೋಟೀಸ್ ನೀಡಲಾಗಿರುತ್ತದೆ. ಆದರೆ ಈ ವರೆಗೂ ವಾಹನದ ಮಾಲೀಕರು ಕಾರಣ ಕೇಳಿ ನೋಟೀಸಿಗೆ ಸೂಕ್ತವಾದ ಉತ್ತರವನ್ನು ನೀಡಲು ವಿಫಲರಾಗಿರುತ್ತಾರೆ. ಅಬಕಾರಿ ನಿರೀಕ್ಷಕರ ವರದಿ ಮತ್ತು ರಾಸಾಯನಿಕ ತಜ್ಞರ ವರದಿಯಂತೆ ದಿನಾಂಕ: 14.3.2000 ರಂದು ಈ ಕಛೇರಿಯ ಆದೇಶ ಸಂಖ್ಯೆ: ಇಎಕ್ಸ್‌ಇ:3:ಸಿಆರ್:ಎಂ:65:1999-2000 ರಂತೆ ಸದರಿ ಮದ್ಯವನ್ನು ಮುಟ್ಟುಗೋಲು ಹಾಕಿಕೊಂಡು ವಿಲೇವಾರಿ ಮಾಡಲಾಗಿರುತ್ತದೆ. ಸದರಿ ಮದ್ಯವನ್ನು ಹರಾಜು ಮೂಲಕ ವಿಲೇ ಮಾಡಿ ಬಂದ ರೂ.1,608/- ರನ್ನು ಸರ್ಕಾರಕ್ಕೆ ಸಂದಾಯ ಮಾಡಲಾಗಿದೆ.

ದಿನಾಂಕ: 28.1.2000ರ ಅರ್ಜಿಯಲ್ಲಿ ಕೋರಿಕೊಂಡಂತೆ ಪರಿಶೀಲಿಸಿ ವಾಹನಕ್ಕೆ ಮೌಲ್ಯವನ್ನು ನಿಗದಿಪಡಿಸಲು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಕೊಡಗು ಜಿಲ್ಲೆ, ಮಡಿಕೇರಿ ರವರಿಗೆ ದಿನಾಂಕ: 21.11.2000 ರಂದು ಪತ್ರವನ್ನು ಬರೆದು ಕೋರಿಕೊಂಡ ಮೇರೆಗೆ ಅವರು ವಾಹನವನ್ನು ಪರಿಶೀಲಿಸಿ ವಾಹನದ ಮೌಲ್ಯವನ್ನು ರೂ.20,000/- ಎಂದು ನಿಗದಿಪಡಿಸಿರುತ್ತಾರೆ. ನಂತರ ವಾಹನದ ಮಾಲೀಕರು ಈ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ. ವಾಹನದ ಮೌಲ್ಯವು ಅವರ ಅಂದಾಜಿನಿಂದ ಹೆಚ್ಚಾಗಿರುತ್ತದೆ, ಆದುದರಿಂದ ನನ್ನ ಫಿರ್ಯಾದಿ ವಾಹನವನ್ನು ತಾತ್ಕಾಲಿಕವಾಗಿ ಬಿಡಿಸಿಕೊಳ್ಳಲು ಮುಂದೆ ಬಂದಿರುವುದಿಲ್ಲವೆಂದು ಅರ್ಜಿದಾರರ ವಕೀಲರಿಂದ ತಿಳಿದು ಬಂದಿರುತ್ತದೆ.

ಈ ಮೊಕದ್ದಮೆಯಲ್ಲಿ ಒಳಗೊಂಡ ಆಟೋರಿಕ್ಷಾ ನಂ: ಕೆಎ-12-1752 ರನ್ನು ಅಬಕಾರಿ ಕಾಯ್ದೆ ಕಲಂ 43ಸಿ ರ ಅಡಿಯಲ್ಲಿ ಮುಟ್ಟುಗೋಲು ಹಾಕಿಕೊಳ್ಳಲು ಸೂಕ್ತವೆಂದು ಈ ಕೆಳಗೆ ಕಾಣಿಸಿರುವ ಕಾರಣಗಳಿಂದ ಕಂಡು ಬರುತ್ತದೆ.

1. ಎರಡು ವರ್ಷ ಕಳೆದರೂ ಸಹಾ ಮೊಕದ್ದಮೆಗೆ ಸಂಬಂಧಪಟ್ಟ ಅರ್ಜಿದಾರರು ಈ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ. ಹಾಜರಾತಿ ಬಗ್ಗೆ ಹಲವಾರು ಸಮನ್ಸ್ ನೀಡಲಾಗಿರುತ್ತದೆ. ಇದರಿಂದಲೇ ವಾಹನದ ಮಾಲೀಕರು ಅಬಕಾರಿ ಕಾನೂನಿನ ಅರಿವಿದ್ದೇ ಅಪರಾಧ ಮಾಡಿರುವುದು ಸಾಬೀತಾಗಿರುತ್ತದೆ.

2. ವಾಹನದ ಮಾಲೀಕರಿಗೆ ತಿಳಿಯಪಡಿಸಲು ದಿನಾಂಕ: 4.10.2004 ರಂದು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಲಾಗಿರುತ್ತದೆ. ಆದರೂ ಸಹಾ ಮಾಲೀಕರು ಹಾಜರಾಗಿರುವುದಿಲ್ಲ.

3. ದಿನಾಂಕ: 28.1.2004 ರಂದು ವಶಪಡಿಸಿಕೊಂಡ ದಾಸ್ತಾನು ತೆರಿಗೆ ರಹಿತ ಸ್ವದೇಹಿ ಮದ್ಯವೆಂದು ಸಾಬೀತಾಗಿರುತ್ತದೆ.

ವಹನವನ್ನು ಇಲಾಖೆಯ ಆವರಣದಲ್ಲಿ ನಿಲ್ಲಿಸಲಾಗಿರುತ್ತದೆ. ಇದು ಹವಾಮಾನದ ವೈಪರೀತ್ಯಕ್ಕೆ ಕಳೆದ ನಾಲ್ಕು ವರ್ಷಗಳಿಂದ ನಿಂತಿದ್ದು, ಅದರ ಬಿಡಿಭಾಗಗಳು ತೀರಾ ತುಕ್ಕು ಹಿಡಿದು ಹದಗೆಡುವ ಸ್ಥಿತಿ ಇರುವುದರಿಂದ, ಇನ್ನು ಹೆಚ್ಚು ಸಮಯ ಹೀಗೆ ನಿಲ್ಲಿಸಿದ್ದಲ್ಲಿ ಸರ್ಕಾರಕ್ಕೆ ಬರುವ ಅಲ್ಪ ಆದಾಯವು ಕೈತಪ್ಪುವ ಸಾಧ್ಯತೆ ಇರುತ್ತದೆ. ಹಾಗೂ ಸದರಿ ವಾಹನದ ಅಧಿಕೃತ ಮಾಲೀಕರು ಸೂಕ್ತ ಸಾಕ್ಷ್ಯಾಧಾರಗಳೊಂದಿಗೆ ಹಾಜರಾಗಿ ಸೂಕ್ತ ಸಮಜಾಯಿಸಿಕೆಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಲು ವಿಫಲರಾಗಿರುತ್ತಾರೆ. ಹಾಗೂ ವಶಪಡಿಸಿಕೊಂಡ ದ್ರವವು ರಾಸಾಯನಿಕ ತಜ್ಞರ ವರದಿಯ ಪ್ರಕಾರ ಮದ್ಯವೆಂದು ಸಾಬೀತಾಗಿರುವುದರಿಂದ, ವಾಹನದ ಮಾಲೀಕರು ಅಬಕಾರಿ ಕಾನೂನನ್ನು ತಿಳಿದೇ ಈ ಕೃತ್ಯದಲ್ಲಿ ತೊಡಗಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ. ಆದುದರಿಂದ ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದೇ ಕೊನೆಯ ಹಂತವಾಗಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶ.

**ಆದೇಶ ನಂ: ಇಎಕ್ಸ್‌ಇ:3:ಡಿಟಿಸಿಆರ್‌ಎಂ:65/1999-2000, ದಿನಾಂಕ: 4ನೇ ಮಾರ್ಚ್ 2005**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳನ್ನು ಪರಿಶೀಲಿಸಲಾಗಿ ಮಹಮದ್ ಇಲಿಯಾಸ್ ಅಹಮದ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ ಆದ ನಾನು ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965ರ ಕಲಂ 43ಎ ರ ಅಡಿಯಲ್ಲಿ

ಸರ್ಕಾರದಿಂದ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಆಬಕಾರಿ ಉಪ ನಿರೀಕ್ಷಕರು, ವಿರಾಜಪೇಟೆ ರವರ ಮೊಕದ್ದಮೆ ಸಂಖ್ಯೆ: 28/1999-2000 ದಿನಾಂಕ: 25.1.2000 ರಲ್ಲಿ ವಶಪಡಿಸಿಕೊಂಡ ಆಟೋ ರಿಕ್ಷಾ ನಂ. ಕೆಎ-12-1752 ರನ್ನು ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 43ಸಿ ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಮಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ: 4.3.2005 ರಂದು ಶೀಘ್ರಲಿಪಿಗಾರರಿಗೆ ಉಕ್ತಲೇಖನ ಕೊಟ್ಟು ಬೆರಳಚ್ಚು ಮಾಡಿಸಿ ಕಂಪ್ಯೂಟರಿನಲ್ಲಿ ಮುದ್ರಿಸಿ, ಪ್ರತಿಯನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶ ಆದ 30 ದಿನಗಳ ನಂತರ ಮುಟ್ಟುಗೋಲು ಹಾಕಿಕೊಂಡ ವಾಹನವನ್ನು ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ ರವರ ಅನುಮೋದನೆಯನ್ನು ಪಡೆದು ಬಹಿರಂಗ ಹರಾಜು ಮೂಲಕ ಕರ್ನಾಟಕ ರಾಜ್ಯ ಅಬಕಾರಿ (ಮುಟ್ಟುಗೋಲು ಹಾಕಿಕೊಂಡು ವಸ್ತುಗಳ ವಿಲೇವಾರಿ) 1697ರ ನಿಯಮದಂತೆ ವಿಲೇವಾರಿ ಮಾಡಲಾಗುವುದೆಂದು ಆದೇಶಿಸಿದೆ.

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್,
ಕೊಡಗು ಜಿಲ್ಲೆ, ಮಡಿಕೇರಿ.

ಪಿ.ಆರ್. 509

**ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಇಎಕ್ಸ್‌ಇ:3:ಡಿಟಿಸಿಆರ್‌ಎಂ:393(ಎ)/2002-03, ದಿನಾಂಕ: 4ನೇ ಫೆಬ್ರವರಿ 2005**

**ಉಪಸ್ಥಿತರು:** ಶ್ರೀ ಮಹಮದ್ ಇಲಿಯಾಸ್ ಅಹಮದ್,
ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ.

| **ಫಿರ್ಯಾದುದಾರರು:** | **ವಿರುದ್ಧ** | **ಆರೋಪಿಗಳು:** |
|---|---|---|
| ಅಬಕಾರಿ ಉಪ ನಿರೀಕ್ಷಕರು, | | ಬಿ.ಕೆ. ರವಿ, ತಂದೆ ಕರಿಶೆಟ್ಟಿ, ಬನ್ನೂರು ಗ್ರಾಮ ಮತ್ತು ಅಂಚೆ, |
| ಸಂಚಾರಿದಳ, ಸೋಮವಾರಪೇಟೆ. | | ಅರಕಲಗೂಡು ತಾಲ್ಲೂಕು, ಹಾಸನ ಜಿಲ್ಲೆ. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 6.3.2002 ರಂದು ಸೋಮವಾರಪೇಟೆ ಸಂಚಾರಿದಳದ ಅಬಕಾರಿ ಉಪ ನಿರೀಕ್ಷಕರು ಸೋಮವಾರಪೇಟೆ ತಾಲ್ಲೂಕು ಬಾಣವಾರ ಚೆಕ್‌ಪೋಸ್ಟ್‌ನಲ್ಲಿ ಗಸ್ತಿನಲ್ಲಿದ್ದಾಗ ನೋಂದಣಿ ಸಂಖ್ಯೆ (ನಂಬರ್ ಪ್ಲೇಟ್) ಇಲ್ಲದ ಯಜ್ಡಿ ಮೋಟಾರ್ ಸೈಕಲ್ ನಲ್ಲಿ ಬಿ.ಕೆ. ರವಿ, ತಂದೆ ಕರಿಶೆಟ್ಟಿ, ಬನ್ನೂರು ಗ್ರಾಮ, ಅರಕಲಗೂಡು ತಾಲ್ಲೂಕು, ಹಾಸನ ಜಿಲ್ಲೆ ಇವರು ಅಕ್ರಮವಾಗಿ 20 ಲೀ. ಶೇಂದಿಯನ್ನು ಸಾಗಾಣಿಕೆ ಮಾಡುತ್ತಿದ್ದುದನ್ನು ಪತ್ತೆ ಹಚ್ಚಿ ರಹದಾರಿ ಇಲ್ಲದೆ ಸಾಗಾಣಿಕೆ ಮಾಡುವುದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ಸೋಮವಾರಪೇಟೆ ಸಂಚಾರಿದಳದ ಪ್ರ.ವ.ನಂ: 25/2002, ದಿನಾಂಕ: 6.3.2002 ರಂತೆ ಪ್ರಕರಣವನ್ನು ದಾಖಲು ಮಾಡಿರುತ್ತಾರೆ.

ವಾಹನದ ಮಾಲೀಕರನ್ನು ಪತ್ತೆ ಹಚ್ಚಲು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಕೋಲಾರ ಜಿಲ್ಲೆ ಇವರಿಗೆ ದಿನಾಂಕ: 19.12.2003 ರಂದು ಪತ್ರ ಬರೆಯಲಾಗಿದ್ದು, ಇಲ್ಲಿಯ ತನಕ ಅವರಿಂದ ಯಾವುದೇ ಉತ್ತರ ಬಂದಿರುವುದಿಲ್ಲ.

1965ನೇ ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಪ್ರಕರಣವನ್ನು ದಾಖಲುಪಡಿಸುವಾಗ ಅಪರಾಧಿಯು ಪತ್ತೆ ಆಗದಿದ್ದಲ್ಲಿ ಅಥವಾ ಪತ್ತೆಯಾಗುವ ಸಾಧ್ಯತೆಗಳು ಇಲ್ಲದಿದ್ದಲ್ಲಿ ಪ್ರಕರಣ ಪತ್ತೆ ಹಚ್ಚಿ ಒಂದು ತಿಂಗಳು ಅವಧಿಯಲ್ಲಿ ಯಾವುದೇ ವ್ಯಕ್ತಿಯು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸದರಿ ಸ್ವತ್ತುಗಳು ತಮ್ಮದೆಂದು ಅವುಗಳು ಕಾನೂನು ಬದ್ಧವಾಗಿದೆ ಎಂದು ಸಾಕ್ಷ್ಯಾಧಾರಗಳೊಂದಿಗೆ ಅರ್ಜಿಯನ್ನು ಸಲ್ಲಿಸದಿದ್ದಲ್ಲಿ ಸದರಿ ಸ್ವತ್ತುಗಳು ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಸ್ವತ್ತುಗಳಾಗಿದ್ದಲ್ಲಿ ಅಂತಹ ವಸ್ತುಗಳನ್ನು ಕಲಂ 43(ಸಿ)ರ ಅಡಿಯಲ್ಲಿ ಜಪ್ತುಪಡಿಸಿದ ಅಕ್ರಮ ಮದ್ಯಸಾರ ಮತ್ತು ಅಕ್ರಮ ಸಾಗಾಣಿಕೆಗೆ ಬಳಸಲಾದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ. ಹಾಗೂ ಸದರಿ ವಾಹನಕ್ಕೆ ಸಂಬಂಧಪಟ್ಟವರು ಪ್ರಾಧಿಕಾರಕ್ಕೆ ಇಲ್ಲಿಯವರೆಗೆ ಹಾಜರಾಗದಿದ್ದ ಕಾರಣ ಅಬಕಾರಿ ಕಾನೂನನ್ನು ತಿಳಿದೇ ಈ ರೀತಿ ಅಕ್ರಮ ಸಾಗಾಣಿಕೆಯಲ್ಲಿ ತೊಡಗಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ.

ಈ ಎಲ್ಲಾ ಅಂಶಗಳನ್ನು ಪರಿಶೀಲಿಸಿದಾಗ ಈ ಪ್ರಾಧಿಕಾರದಲ್ಲಿ ಲಭ್ಯವಿರುವ ದಾಖಲಾತಿಗಳಿಂದ ಪ್ರಥಮ ಮಾಹಿತಿ ವರದಿ, ಹಾಗೂ ಅಬಕಾರಿ ನಿರೀಕ್ಷಕರು, ಸೋಮವಾರಪೇಟೆ ವಲಯ ರವರ ವರದಿ ದಿನಾಂಕ: 16.10.2004 ರಂತೆ ಪರಿಶೀಲನೆ ಮಾಡಿದಲ್ಲಿ ಬೈಕ್ ಸಂಖ್ಯೆ: ಎಂ.ವೈ.ಕೆ-285 ರಲ್ಲಿನ ಆರೋಪಿಯು ಅಕ್ರಮವಾಗಿ 20 ಲೀ. ಶೇಂದಿಯನ್ನು ಸಾಗಾಣಿಕೆ ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ. ಸ್ವತಃ ವಾಹನ ಮಾಲೀಕರೇ ಈ ಕಾನೂನು ಬಾಹಿರ ಕೃತ್ಯವನ್ನು ಎಸಗಿರುತ್ತಾರೆಂದು ಈ ಪ್ರಾಧಿಕಾರವು ತೀರ್ಮಾನಕ್ಕೆ ಬರಬೇಕಾಗಿರುತ್ತದೆ. ವಾಹನವನ್ನು ತೆರೆದ ಪ್ರದೇಶದಲ್ಲಿ ಅದು ಬಿಸಿಲು, ಮಳೆ, ಹವಾಮಾನ ವೈಪರೀತ್ಯಗಳಿಗೆ ವಾಹನವು ದಿನೇ ದಿನೇ ತನ್ನ ಗುಣಮಟ್ಟವನ್ನು ಕಳೆದುಕೊಳ್ಳುವ ಸಂಭವವಿದ್ದು, ಅದರ ಮೌಲ್ಯವು ಕಡಿಮೆಯಾಗುವ ಸಾಧ್ಯತೆ ಇರುವುದರಿಂದ ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಹಾಗೂ ಅಬಕಾರಿ ನಿರೀಕ್ಷಕರ ಮತ್ತು ಉಪ ನಿರೀಕ್ಷಕರ ತನಿಖಾ ವರದಿಯ ಪ್ರಕಾರ ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಮೋಟಾರ್ ಬೈಕ್ ನಂ: ಎಂ.ವೈ.ಕೆ.-285 ರನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಈ ಪ್ರಾಧಿಕಾರವು ತೀರ್ಮಾನಿಸಿ ಈ ಕೆಳಗಿನಂತೆ ಆದೇಶ.

**ಆದೇಶ ನಂ: ಇಎಕ್ಸ್‌ಇ:3:ಡಿಟಿಸಿಆರ್‌ಎಂ:393(ಎ)/2002-03, ದಿನಾಂಕ: 4ನೇ ಫೆಬ್ರವರಿ 2005**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳನ್ನು ಪರಿಶೀಲಿಸಲಾಗಿ ಮಹಮದ್ ಇಲಿಯಾಸ್ ಅಹಮದ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ ಆದ ನಾನು ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965ರ ಕಲಂ 43ಎ ರ ಅಡಿಯಲ್ಲಿ ಸರ್ಕಾರದಿಂದ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ಉಪ ನಿರೀಕ್ಷಕರು, ಸೋಮವಾರಪೇಟೆ ಸಂಚಾರಿದಳ ರವರ ಮೊಕದ್ದಮೆ ಸಂಖ್ಯೆ: 25/2002, ದಿನಾಂಕ: 6.3.2002 ರಲ್ಲಿ ವಶಪಡಿಸಿಕೊಂಡ ಮೋಟಾರ್ ಬೈಕ್ ನಂ: ಎಂ.ವೈ.ಕೆ.-285 ರನ್ನು ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 43(ಎ)(2) ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ: 4.2.2005 ರಂದು ಶೀಘ್ರಲಿಪಿಗಾರರಿಗೆ ಉಕ್ತಲೇಖನ ಕೊಟ್ಟು ಬೆರಳಚ್ಚು ಮಾಡಿಸಿ ಕಂಪ್ಯೂಟರಿನಲ್ಲಿ ಮುದ್ರಿಸಿ, ಪ್ರತಿಯನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶ ಆದ 30 ದಿನಗಳ ನಂತರ ಮುಟ್ಟುಗೋಲು ಹಾಕಿಕೊಂಡ ವಾಹನವನ್ನು ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ ರವರ ಅನುಮೋದನೆಯನ್ನು ಪಡೆದು ಬಹಿರಂಗ ಹರಾಜು ಮೂಲಕ ಕರ್ನಾಟಕ ರಾಜ್ಯ ಅಬಕಾರಿ (ಮುಟ್ಟುಗೋಲು ಹಾಕಿಕೊಂಡ ವಸ್ತುಗಳ ವಿಲೇವಾರಿ) 1967ರ ನಿಯಮದಂತೆ ವಿಲೇವಾರಿ ಮಾಡಲಾಗುವುದೆಂದು ಆದೇಶಿಸಿದೆ.

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್,
ಕೊಡಗು ಜಿಲ್ಲೆ, ಮಡಿಕೇರಿ.

ಪಿ.ಆರ್. 478

**ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಇಎಕ್ಸ್‌ಇ:3:ಡಿಟಿಸಿಆರ್‌ಎಂ:415/2002-03, ದಿನಾಂಕ: 5ನೇ ಫೆಬ್ರವರಿ 2005**

**ಉಪಸ್ಥಿತರು:** ಶ್ರೀ ಮಹಮದ್ ಇಲಿಯಾಸ್ ಅಹಮದ್,

ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ.

| **ಫಿರ್ಯಾದುದಾರರು:** | **ವಿರುದ್ಧ** | **ಆರೋಪಿಗಳು:** |
|---|---|---|
| ಆರಕ್ಷಕ ಉಪ ನಿರೀಕ್ಷಕರು,<br>ವಿರಾಜಪೇಟೆ ನಗರ ಠಾಣೆ. | 1) | ಪಿ.ಕೆ. ಪ್ರವೀಣ್, ತಂದೆ ಕುಟ್ಟನ್, ಕಾರು ಚಾಲಕ,<br>ಕೃಪ ಮಂಗಲ ಗ್ರಾಮ ಹಾಗೂ ಪಂಚಾಯತು, ತ್ರಿಚೂರು ಜಿಲ್ಲೆ, ಕೇರಳ ರಾಜ್ಯ. |
| | 2) | ಪುಳಿಕಲ್ ಪ್ರೀಯನ್, ತಂದೆ ಧರ್ಮಪಾಲನ್,<br>ವಿಡತಿರತ್ ಗ್ರಾಮ, ಕೊಡಂಗಲ್ಲುರು ತಾಲ್ಲೂಕು, ತ್ರಿಚೂರು ಜಿಲ್ಲೆ, ಕೇರಳ. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 9.3.2003 ರಂದು ವಿರಾಜಪೇಟೆ ನಗರ ಠಾಣೆ ಪೊಲೀಸ್ ಉಪ ನಿರೀಕ್ಷಕರು, ಠಾಣೆಯಲ್ಲಿರುವಾಗ್ಗೆ ಬೆಳಿಗ್ಗೆ 10.00 ಗಂಟೆಗೆ ವಿರಾಜಪೇಟೆ ಕಡೆಯಿಂದ ಪೆರಂಬಾಡಿ ಮಾರ್ಗವಾಗಿ ಮಾಕುಟ್ಟ ಕಡೆಗೆ ಅಕ್ರಮ ಬ್ರಾಂಡಿ ತುಂಬಿದ ಬಾಟ್ಲಿಗಳನ್ನು ಕಾರಿನಲ್ಲಿ ಸಾಗಿಸುತ್ತಿದ್ದಾರೆಂದು ದೊರೆತ ಖಚಿತ ವರ್ತಮಾನದ ಮೇರೆಗೆ ಪಂಚಾಯತುದಾರರನ್ನು ಕರೆದುಕೊಂಡು ಹೋಗಿ ಪೆರಂಬಾಡಿ ಚೆಕ್‌ಪೋಸ್ಟ್ ಬಳಿ ಕಾದು ಕುಳಿತಿದ್ದಾಗ ರಾತ್ರಿ 10.30ರ ಸಮಯದಲ್ಲಿ ವಿರಾಜಪೇಟೆ ಕಡೆಯಿಂದ ಮಾಕುಟ್ಟ ಕಡೆಗೆ ಒಂದು ಬಿಳಿ ಬಣ್ಣದ ಕಾರು ನಂ: ಕೆ.ಆರ್.ಕೆ.-7701 ಬರುತ್ತಿದ್ದು, ಸದರಿ ಕಾರನ್ನು ನಿಲ್ಲಿಸುವಂತೆ ಸೂಚಿಸಿರುತ್ತಾರೆ. ವಾಹನದ ಚಾಲಕನು ವಾಹನವನ್ನು ನಿಲ್ಲಿಸಿದ್ದು, ಚಾಲಕ ಹಾಗೂ ಮತ್ತೊಬ್ಬ ಹಿಂಭಾಗದಲ್ಲಿ ಕುಳಿತಿದ್ದು, ಆಸಾಮಿಗಳು ಕಾರಿನ ಡೋರ್ ಮೂಲಕ ಓಡಲು ಪ್ರಯತ್ನಿಸಿದವರನ್ನು ಸುತ್ತುವರಿದು ಹಿಡಿದು, ನಂತರ ಕಾರಿನ ಒಳಭಾಗದಲ್ಲಿ ಬ್ರಾಂಡಿ ತುಂಬಿದ ಬಾಟ್ಲಿಗಳನ್ನು ಶೇಖರಿಸಿ ಇಟ್ಟಿದ್ದು ಅಲ್ಲದೆ ಪುನಃ ಪರಿಶೀಲಿಸಲಾಗಿ ಕಾರಿನ ಒಳಭಾಗದ ಡ್ಯಾಶ್ ಬೋರ್ಡ್ ಒಳಗೆ ಹಾಗೂ ಮುಂಭಾಗ ಬಾನೆಟ್‌ನ ಒಳಭಾಗದಲ್ಲಿ ಬ್ರಾಂಡಿ ಬಾಟಲಿಗಳು ಇಟ್ಟಿರುವುದು ಕಂಡು ಬಂದಿರುತ್ತದೆ. ಸದರಿ ಆಸಾಮಿಗಳಲ್ಲಿ ಬ್ರಾಂಡಿ ಬಾಟಲಿಗಳನ್ನು ಸಾಗಿಸಲು ಯಾವುದಾದರೂ ಸರ್ಕಾರದ ಪರವಾನಿಗೆ ಇದೆಯೇ ಎಂದು ಕೇಳಲಾಗಿ ಇಲ್ಲವೆಂದು ತಿಳಿಸಿದ ಮೇರೆಗೆ ಸದರಿ ಬಾಟಲಿಗಳನ್ನು ಪಂಚರ ಸಮಕ್ಷಮ ಎಣಿಕೆ ಮಾಡಲಾಗಿ ಒಟ್ಟು 250 ಬಾಟಲಿಗಳಿರುವುದು ಕಂಡು ಬಂದಿರುತ್ತದೆ. ಸದರಿ ಬ್ರಾಂಡಿ ಬಾಟಲಿಗಳನ್ನು ತೆಗೆದು ನೋಡಲಾಗಿ ಪ್ಲಾಸ್ಟಿಕ್ ಪೆಟ್ ಬಾಟಲಿಗಳಲ್ಲಿ ಬ್ರಾಂಡಿಯನ್ನು ತುಂಬಿಸಿದ್ದು, ಬಾಟ್ಲಿಗಳ ಹೊರಭಾಗದಲ್ಲಿ ಬಿಳಿ ಲೇಬಲ್‌ನ ಮೇಲೆ ನ್ಯೂ ಜನತಾ ಬ್ರಾಂಡಿ 750 ಎಂ.ಎಲ್., ಕರ್ನಾಟಕ ರಾಜ್ಯದಲ್ಲಿ ಮಾರಾಟ ಮಾತ್ರ ಜಾನ್ ಡಿಸ್ಟಿಲ್ಲರಿ ಲಿಮಿಟೆಡ್ ಎಂದು ಬರೆದಿದ್ದು, ಬಾಟ್ಲಿಯ ಮುಚ್ಚಳಕ್ಕೆ ಮೇಲೆ ಅಬಕಾರಿ ಇಲಾಖೆಯವರ ಹಸಿರು ಬಣ್ಣದ ಲೇಬಲನ್ನು ಅಂಟಿಸಿರುತ್ತದೆ. 250 ಬಾಟಲಿಗಳಿಂದ ಮಾದರಿಗಾಗಿ ಎರಡು ಬ್ರಾಂಡಿ ಬಾಟಲಿಗಳನ್ನು ತೆಗೆಯಲಾಗಿರುತ್ತದೆ. ಸದರಿ ಅಕ್ರಮ ಸಾಗಾಣಿಕೆಯಲ್ಲಿ ತೊಡಗಿದ್ದ ಕಾರನ್ನು ಪಂಚರ ಸಮಕ್ಷಮ ಮಾಲು ಸಮೇತ ವಶಪಡಿಸಿಕೊಂಡು ಮೊ.ಸಂ: 28/2003, ದಿನಾಂಕ: 9.3.2003 ರಂತೆ ಮೊಕದ್ದಮೆಯನ್ನು ದಾಖಲು ಮಾಡಿಕೊಂಡು ಅಬಕಾರಿ ಉಪ ನಿರೀಕ್ಷಕರು, ಉಪ ವಲಯ ರವರಿಗೆ ಹಸ್ತಾಂತರಿಸಿರುತ್ತಾರೆ.

ವಶಪಡಿಸಿಕೊಂಡ ಮದ್ಯದಿಂದ ಮಾದರಿ ತೆಗೆದು ರಾಸಾಯನಿಕ ತಜ್ಞರು, ಮಂಗಳೂರು ರವರಿಗೆ ದಿನಾಂಕ: 16.7.2003 ರಂದು ಕಳಿಸಲಾಗಿದ್ದು, ಅವರ ವರದಿ ದಿನಾಂಕ: 28.7.2003 ರಲ್ಲಿ ಮದ್ಯವೆಂದು ಸಾಬೀತಾಗಿರುತ್ತದೆ.

ದಿನಾಂಕ: 28.10.2003 ರಂದು ಸದರಿ ವಾಹನದ ಮಾಲೀಕರನ್ನು ಪತ್ತೆ ಹಚ್ಚಲು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಕೊಟ್ಟಾಯಂ, ಕೇರಳ ರಾಜ್ಯ ರವರಿಗೆ ಪತ್ರ ಬರೆದು 'ಬಿ' ಎಕ್ಸ್‌ಟ್ರಾಕ್ಟ್ ಕಳಿಸಿಕೊಡುವಂತೆ ಕೋರಲಾಗಿತ್ತು. ಆದರೆ ಇಂದಿನ ವರೆಗೂ ಅವರಿಂದ ಉತ್ತರ ಬಾರದ ಕಾರಣ 43ಬಿರ ಅಡಿಯಲ್ಲಿ ಕ್ರಮ ಕೈಗೊಳ್ಳಲು ಸಾಧ್ಯವಾಗಿರುವುದಿಲ್ಲ. ಹಾಗೂ ಸಾರ್ವಜನಿಕರಿಗೆ ತಿಳಿಯಪಡಿಸಲು ದಿನಾಂಕ: 19.8.2004ರ ಕರ್ನಾಟಕ ರಾಜ್ಯ ಪತ್ರದಲ್ಲಿಯೂ ಪ್ರಕಟಿಸಲಾಗಿರುತ್ತದೆ. ಆದರೆ ಇಂದಿನ ವರೆಗೂ ಅವರಿಂದ ಯಾವುದೇ ಉತ್ತರ ಬಂದಿರುವುದಿಲ್ಲ. ನಂತರ ದಿನಾಂಕ: 23.2.2004 ರಂದು ಸದರಿ ಪ್ರಾದೇಶಿಕ ಸಾರಿಗೆ ಅಧಿಕಾರಿಯವರಿಗೆ ಮತ್ತೊಮ್ಮೆ ಪತ್ರ ಬರೆಯಲಾಯಿತು. ಪತ್ರ ತಲುಪಿದ ಬಗ್ಗೆ ಸ್ವೀಕೃತಿ ಪತ್ರ ಬಂದಿರುತ್ತದೆ.

ಮೊಕದ್ದಮೆ ದಾಖಲಾಗಿ ಸುಮಾರು ಎರಡು ವರ್ಷ ಕಳೆದರೂ ವಾಹನದ ಮಾಲೀಕರಾಗಲೀ ಅವರ ಪರ ವಕೀಲರಾಗಲೀ ಅಥವಾ ಸಂಬಂಧಪಟ್ಟವರಾಗಲೀ ವಾಹನ ತನಗೆ ಸಂಬಂಧಪಟ್ಟದ್ದೆಂದು ಪ್ರಾಧಿಕಾರದ ಮುಂದೆ ಹಾಜರಾಗಿ ಈ ವರೆಗೂ ಅರ್ಜಿ ಸಲ್ಲಿಸಿರುವುದಿಲ್ಲ. ಹಾಗೂ ಸದರಿ ವಾಹನದಲ್ಲಿ ಸ್ವದೇಶಿ ಮದ್ಯವನ್ನು ಸಾಗಿಸಲು ಅಧಿಕೃತ ದಾಖಲಾತಿಗಳನ್ನು ಸಹಾ ಸೂಕ್ತ ಸಾಕ್ಷ್ಯಾಧಾರಗಳೊಂದಿಗೆ ಪ್ರಾಧಿಕಾರಕ್ಕೆ ಹಾಜರುಪಡಿಸಲು ವಿಫಲರಾಗಿರುತ್ತಾರೆ.

ಆದುದರಿಂದ 1965ನೇ ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಪ್ರಕರಣವನ್ನು ದಾಖಲು ಪಡಿಸುವಾಗ ಅಪರಾಧಿಯು ಪತ್ತೆ ಆಗದಿದ್ದಲ್ಲಿ ಅಥವಾ ಪತ್ತೆಯಾಗುವ ಸಾಧ್ಯತೆಗಳು ಇಲ್ಲದಿದ್ದಲ್ಲಿ ಪ್ರಕರಣ ಪತ್ತೆ ಹಚ್ಚಿ ಒಂದು ತಿಂಗಳು ಅವಧಿಯಲ್ಲಿ ಯಾವುದೇ ವ್ಯಕ್ತಿಯು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸದರಿ ಸ್ವತ್ತುಗಳು ತಮ್ಮದೆಂದು ಅವುಗಳು ಕಾನೂನು ಬದ್ಧವಾಗಿದೆ ಎಂದು ಸಾಕ್ಷ್ಯಾಧಾರಗಳೊಂದಿಗೆ ಅರ್ಜಿಯನ್ನು ಸಲ್ಲಿಸದಿದ್ದಲ್ಲಿ ಸದರಿ ಸ್ವತ್ತುಗಳು ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಸ್ವತ್ತುಗಳಾಗಿದ್ದಲ್ಲಿ ಅಂತಹ ವಸ್ತುಗಳನ್ನು ಕಲಂ 43(ಸಿ)ರ ಅಡಿಯಲ್ಲಿ ಜಪ್ತುಪಡಿಸಿದ ಅಕ್ರಮ ಸ್ವದೇಶಿ ಮದ್ಯ ಮತ್ತು ಅಕ್ರಮ ಸಾಗಾಣಿಕೆಗೆ ಬಳಸಲಾದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ. ಹಾಗೂ ಸದರಿ ವಾಹನಕ್ಕೆ ಸಂಬಂಧಪಟ್ಟವರು ಪ್ರಾಧಿಕಾರಕ್ಕೆ ಇಲ್ಲಿಯವರೆಗೆ ಹಾಜರಾಗದಿದ್ದ ಕಾರಣ ಅಬಕಾರಿ ಕಾನೂನನ್ನು ತಿಳಿದೇ ಈ ರೀತಿ ಅಕ್ರಮ ಸಾಗಾಣಿಕೆಯಲ್ಲಿ ತೊಡಗಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ.

ಈ ಎಲ್ಲಾ ಅಂಶಗಳನ್ನು ಪರಿಶೀಲಿಸಿದಾಗ ಈ ಪ್ರಾಧಿಕಾರದಲ್ಲಿ ಲಭ್ಯವಿರುವ ದಾಖಲಾತಿಗಳಿಂದ ಪ್ರಥಮ ಮಾಹಿತಿ ವರದಿ, ಹಾಗೂ ಅಬಕಾರಿ ಉಪ ನಿರೀಕ್ಷಕರು, ಉಪ ವಲಯ, ವಿರಾಜಪೇಟೆ ರವರ ವರದಿಯನ್ನು ಪರಿಶೀಲನೆ ಮಾಡಿದಲ್ಲಿ ಕಾರು ನಂ. ಕೆ.ಆರ್.ಕೆ.-7701 ಆರೋಪಿಯು ಅಕ್ರಮವಾಗಿ 186 ಲೀ. ಸ್ವದೇಶಿ ಮದ್ಯ ಸಾಗಾಣಿಕೆ ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ. ಮತ್ತು ಮದ್ಯವೆಂದು ರಾಸಾಯನಿಕ ತಜ್ಞರ ವರದಿಯಲ್ಲಿ ದೃಢಪಟ್ಟಿರುತ್ತದೆ. ಸ್ವತಃ ವಾಹನ ಮಾಲೀಕರೇ ಈ ಕಾನೂನು ಬಾಹಿರ ಕೃತ್ಯವನ್ನು ಎಸಗಿರುತ್ತಾರೆಂದು ಈ ಪ್ರಾಧಿಕಾರವು ತೀರ್ಮಾನಕ್ಕೆ ಬರಬೇಕಾಗಿರುತ್ತದೆ. ವಾಹನವನ್ನು ತೆರೆದ ಪ್ರದೇಶದಲ್ಲಿ ಅದು ಬಿಸಿಲು, ಮಳೆ, ಹವಾಮಾನ ವೈಪರೀತ್ಯಗಳಿಗೆ ವಾಹನವು ದಿನೇ ದಿನೇ ತನ್ನ ಗುಣಮಟ್ಟವನ್ನು ಕಳೆದುಕೊಳ್ಳುವ ಸಂಭವವಿದ್ದು, ಅದರ ಮೌಲ್ಯವು ಕಡಿಮೆಯಾಗುವ ಸಾಧ್ಯತೆ ಇರುವುದರಿಂದ ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಕಾರು ನಂ: ಕೆ.ಆರ್.ಕೆ.-7701 ರನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಈ ಪ್ರಾಧಿಕಾರವು ತೀರ್ಮಾನಿಸಿ ಈ ಕೆಳಗಿನಂತೆ ಆದೇಶ.

**ಆದೇಶ ನಂ: ಇಎಕ್ಸ್‌ಇ:3:ಡಿಟಿಸಿಆರ್‌ಎಂ:415/2002-03, ದಿನಾಂಕ: 5ನೇ ಫೆಬ್ರವರಿ 2005**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳನ್ನು ಪರಿಶೀಲಿಸಲಾಗಿ ಮಹಮದ್ ಇಲಿಯಾಸ್ ಅಹಮದ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ ಆದ ನಾನು ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965ರ ಕಲಂ 43ಎ ರ ಅಡಿಯಲ್ಲಿ ಸರ್ಕಾರದಿಂದ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಆರಕ್ಷಕ ಉಪ ನಿರೀಕ್ಷಕರು, ವಿರಾಜಪೇಟೆ ನಗರ ಠಾಣೆ, ವಿರಾಜಪೇಟೆ ರವರ ಮೊಕದ್ದಮೆ ಸಂಖ್ಯೆ: 28/2003, ದಿನಾಂಕ: 9.3.2003 ರಲ್ಲಿ ವಶಪಡಿಸಿಕೊಂಡ ಅಂಬಾಸಿಡರ್ ಕಾರು ನಂ: ಕೆ.ಆರ್.ಕೆ.-7701 ರನ್ನು ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 43(ಎ)(2) ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ: 5.2.2005 ರಂದು ಶೀಘ್ರಲಿಪಿಗಾರರಿಗೆ ಉಕ್ತಲೇಖನ ಕೊಟ್ಟು ಬೆರಳಚ್ಚು ಮಾಡಿಸಿ ಕಂಪ್ಯೂಟರಿನಲ್ಲಿ ಮುದ್ರಿಸಿ, ಪ್ರತಿಯನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶ ಆದ 30 ದಿನಗಳ ನಂತರ ಮುಟ್ಟುಗೋಲು ಹಾಕಿಕೊಂಡ ವಾಹನವನ್ನು ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ ರವರ ಅನುಮೋದನೆಯನ್ನು ಪಡೆದು ಬಹಿರಂಗ ಹರಾಜು ಮೂಲಕ ಕರ್ನಾಟಕ ರಾಜ್ಯ ಅಬಕಾರಿ (ಮುಟ್ಟುಗೋಲು ಹಾಕಿಕೊಂಡು ವಸ್ತುಗಳ ವಿಲೇವಾರಿ) 1967ರ ನಿಯಮದಂತೆ ವಿಲೇವಾರಿ ಮಾಡಲಾಗುವುದೆಂದು ಆದೇಶಿಸಿದೆ.

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್,
ಕೊಡಗು ಜಿಲ್ಲೆ, ಮಡಿಕೇರಿ.

ಪಿ.ಆರ್. 479

**ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಇಎಕ್ಸ್‌ಇ:3:ಡಿಟಿಸಿಆರ್‌ಎಂ:10/2004-05, ದಿನಾಂಕ: 5ನೇ ಫೆಬ್ರವರಿ 2005**

**ಉಪಸ್ಥಿತರು:** ಶ್ರೀ ಮಹಮದ್ ಇಲಿಯಾಸ್ ಅಹಮದ್,
ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ.

| **ಫಿರ್ಯಾದುದಾರರು:** | **ವಿರುದ್ಧ** | **ಆರೋಪಿಗಳು:** |
|---|---|---|
| ಅಬಕಾರಿ ಉಪ ನಿರೀಕ್ಷಕರು, | 1) | ಕೆ.ಕೆ. ಸಜೀದ್, ತಂದೆ ಕುಂಜಿ ಮಹಮದ್, ಕಡುಕಪಳ್ಳಿ, ಕುಚೇರಿಕೋಡು. |
| ವಿರಾಜಪೇಟೆ ಸಂಚಾರಿದಳ. | 2) | ಟಿ.ವಿ. ಅನೀಶ್ ಕುಮಾರ್, ತಂದೆ ವಿಜಯನ್ ಪಿಳ್ಳೆ, ಮಟ್ಟನೂರು, ತಲಚೇರಿ ಕೋಡು, ಕಣ್ಣೂರು, ಕೇರಳ. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 10.8.2004 ರಂದು ಅಬಕಾರಿ ಉಪ ನಿರೀಕ್ಷಕರು, ಸಂಚಾರಿದಳ, ವಿರಾಜಪೇಟೆ ಇವರು ಬೆಳಿಗ್ಗೆ 7.00 ಗಂಟೆಯ ಸಮಯದಲ್ಲಿ ಆನೇಚೌಕೂರ್ ಗೇಟ್‌ನಲ್ಲಿ ಗಸ್ತು ಹಾಗೂ ವಾಹನಗಳ ತಪಾಸಣೆಯ ಸಂದರ್ಭದಲ್ಲಿ ವಾಹನ ಮಾರುತಿ ವ್ಯಾನ್ ಸಂಖ್ಯೆ: ಕೆ.ಎಲ್.-5-9943ರ ವಾಹನವು ಬಂದಿದ್ದು, ಅದನ್ನು ತಡೆದು ನಿಲ್ಲಿಸಿ ಸ್ಥಳದಲ್ಲಿದ್ದ ಪಂಚರ ಸಮಕ್ಷಮದಲ್ಲಿ ತಪಾಸಣೆ ಮಾಡಲಾಗಿ ಮಾರುತಿ ವ್ಯಾನಿನ ಒಳಗಡೆ 10 ಪ್ಲಾಸ್ಟಿಕ್ ಕ್ಯಾನ್‌ಗಳಿದ್ದು, ಅವುಗಳಲ್ಲಿ ಏನಿದೆ ಎಂದು ವಾಹನದಲ್ಲಿದ್ದ ಒಂದನೇ ಕೆ.ಕೆ. ಸಜೀದ್, ತಂದೆ ಕುಂಜಿಮಹಮದ್, ಕುಚೇರಿಕೋಡು, ಕೊಡನಾಡು ಅಂಚೆ, ಮಟ್ಟನೂರು, ತಲಚೇರಿ, ಕಣ್ಣೂರು, ಎರಡನೇ ಟಿ.ವಿ. ಅನೀಶ್ ಕುಮಾರ್, ತಂದೆ ವಿಜಯನ್ ಪಿಳ್ಳೆ, ಮಟ್ಟನೂರು ತಲಚೇರಿ ಎಂಬುವವರಿದ್ದು, ಅವರುಗಳನ್ನು ಕ್ಯಾನಿನಲ್ಲಿ ಏನಿದೆ ಎಂದು ವಿಚಾರಿಸಲಾಗಿ ಮದ್ಯಸಾರವೆಂದು ತಿಳಿಸಿದ್ದು, ಇವುಗಳನ್ನು ಸಾಗಿಸಲು ರಹದಾರಿ ಇದೆಯೇ ಎಂದು ಕೇಳಲಾಗಿ ಯಾವುದೂ ಇಲ್ಲವೆಂದು ತಿಳಿಸಿದ್ದರಿಂದ ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ವಾಹನ ಮತ್ತು 10 ಕ್ಯಾನುಗಳಲ್ಲಿ 35 ಲೀಟರಿನಂತೆ ಒಟ್ಟು 350 ಲೀ. ದ್ರವ ಮತ್ತು ವಾಹನವನ್ನು ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965ರ ನಿಯಮ 11, 12, 14 ರಂತೆ 32, 34, 38(ಎ) ರಂತೆ ಮೊಕದ್ದಮೆ ಸಂಖ್ಯೆ: 3/2004-05, ದಿನಾಂಕ: 10.8.2004 ರಂತೆ ಮೊಕದ್ದಮೆ ದಾಖಲು ಮಾಡಿಕೊಂಡು ಮುಂದಿನ ಕ್ರಮದ ಬಗ್ಗೆ ಅಬಕಾರಿ ನಿರೀಕ್ಷಕರು, ಉಪ ವಲಯ, ವಿರಾಜಪೇಟೆ ರವರಿಗೆ ಹಸ್ತಾಂತರಿಸಿರುತ್ತಾರೆ.

ವಶಪಡಿಸಿಕೊಂಡ ಮದ್ಯಸಾರದಿಂದ ಮಾದರಿ ತೆಗೆದು ರಾಸಾಯನಿಕ ವಿಶ್ಲೇಷಕರು, ಮಂಗಳೂರು ರವರಿಗೆ ಕಳಿಸಲಾಗಿದ್ದು, ಅವರ ವರದಿ ದಿನಾಂಕ: 1.2.2005ರ ಪ್ರಕಾರ ಸದರಿ ದ್ರವವು ಮದ್ಯಸಾರವೆಂದು ಸಾಬೀತಾಗಿರುತ್ತದೆ.

ಸದರಿ ವಾಹನದ ಮಾಲೀಕರನ್ನು ಪತ್ತೆ ಹಚ್ಚಲು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಚೆಂಗನಚೇರಿ, ಕೇರಳ ರಾಜ್ಯ ರವರಿಗೆ ದಿನಾಂಕ: 23.9.04 ರಂದು ಪತ್ರ ಬರೆಯಲಾಗಿದ್ದು, ಅವರಿಂದ ದಿನಾಂಕ: 5.11.2004 ರಂದು ಬಂದ ವರದಿಯ ಪ್ರಕಾರ ಅಲ್‌ಪುಜಾ ಪ್ರಾದೇಶಿಕ ಸಾರಿಗೆ ಅಧಿಕಾರಿಗಳ ಕಛೇರಿಯಲ್ಲಿ ವಿಚಾರಿಸಲು ತಿಳಿಸಿದ್ದು, ಅದರಂತೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಅಲ್‌ಪುಜಾ, ಕೇರಳ ರಾಜ್ಯ ರವರಿಗೆ ದಿನಾಂಕ: 25.11.2004 ರಂದು ಪತ್ರ ಬರೆಯಲಾಗಿದ್ದು, ದಿನಾಂಕ: 18.12.2004 ರಂದು ಅವರಿಂದ ಬಂದ ವರದಿಯ ಪ್ರಕಾರ ಶ್ರೀ ಕೆ.ಇ. ಅಬ್ದುಲ್ ರಹೀಂ, ತಂದೆ ಖಾದರ್ ಇಬ್ರಾಹಿಂ, ಸಮೀರ್ ಮಂಜಿಲ್, ಲಜನತ್ ವಾರ್ಡ್, ಯು.ಪಿ.ರೋಡ್, ಅಲ್ ಪುಜಾ ರವರಿಗೆ 43ಬಿ ರ ಪ್ರಕಾರ ಕಾರಣ ಕೇಳಿಕೆ ನೋಟೀಸ್ ನೀಡಿ ಪತ್ರ ತಲುಪಿದ ಒಂದು ವಾರದೊಳಗೆ ನೀವಾಗಲೀ ನಿಮ್ಮ ಪರ ವಕೀಲರ ಮೂಲಕವಾಗಲೀ ಈ ಪ್ರಾಧಿಕಾರಕ್ಕೆ ಅರ್ಜಿ ಸಲ್ಲಿಸುವಂತೆ

ಸೂಚಿಸಲಾಗಿತ್ತು. ಪತ್ರ ಬರೆದು ಎರಡು ತಿಂಗಳಾಗುತ್ತಾ ಬಂದರೂ ಸದರಿ ವಾಹನದ ಮಾಲೀಕರು ಪ್ರಾಧಿಕಾರದ ಮುಂದೆ ಹಾಜರಾಗಿ ಅರ್ಜಿ ಸಲ್ಲಿಸಿರುವುದಿಲ್ಲ. ಹಾಗೂ ಅವರ ಪರ ವಕೀಲರಾಗಲೀ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ. ಆದುದರಿಂದ ವಾಹನದ ಮಾಲೀಕರು ಕಾನೂನಿನ ಅರಿವಿದ್ದೇ ಈ ಕೃತ್ಯ ಎಸಗಿರುವುದು ಈ ಪ್ರಾಧಿಕಾರದಲ್ಲಿ ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ.

ಆದುದರಿಂದ 1965ನೇ ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಪ್ರಕರಣವನ್ನು ದಾಖಲು ಪಡಿಸುವಾಗ ಅಪರಾಧಿಯು ಪತ್ತೆ ಆಗದಿದ್ದಲ್ಲಿ ಅಥವಾ ಪತ್ತೆಯಾಗುವ ಸಾಧ್ಯತೆಗಳು ಇಲ್ಲದಿದ್ದಲ್ಲಿ ಪ್ರಕರಣ ಪತ್ತೆ ಹಚ್ಚಿ ಒಂದು ತಿಂಗಳು ಅವಧಿಯಲ್ಲಿ ಯಾವುದೇ ವ್ಯಕ್ತಿಯು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸದರಿ ಸ್ವತ್ತುಗಳು ತಮ್ಮದೆಂದು ಅವುಗಳು ಕಾನೂನು ಬದ್ಧವಾಗಿದೆ ಎಂದು ಸಾಕ್ಷ್ಯಾಧಾರಗಳೊಂದಿಗೆ ಅರ್ಜಿಯನ್ನು ಸಲ್ಲಿಸದಿದ್ದಲ್ಲಿ ಸದರಿ ಸ್ವತ್ತುಗಳು ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಸ್ವತ್ತುಗಳಾಗಿದ್ದಲ್ಲಿ ಅಂತಹ ವಸ್ತುಗಳನ್ನು ಕಲಂ 43(ಸಿ)ರ ಅಡಿಯಲ್ಲಿ ಜಪ್ತುಪಡಿಸಿದ ಅಕ್ರಮ ಮದ್ಯಸಾರ ಮತ್ತು ಅಕ್ರಮ ಸಾಗಾಣಿಕೆಗೆ ಬಳಸಲಾದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ. ಹಾಗೂ ಸದರಿ ವಾಹನಕ್ಕೆ ಸಂಬಂಧಪಟ್ಟವರು ಪ್ರಾಧಿಕಾರಕ್ಕೆ ಇಲ್ಲಿಯವರೆಗೆ ಹಾಜರಾಗದಿದ್ದ ಕಾರಣ ಅಬಕಾರಿ ಕಾನೂನನ್ನು ತಿಳಿದೇ ಈ ರೀತಿ ಅಕ್ರಮ ಸಾಗಾಣಿಕೆಯಲ್ಲಿ ತೊಡಗಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ.

ಈ ಎಲ್ಲಾ ಅಂಶಗಳನ್ನು ಪರಿಶೀಲಿಸಿದಾಗ ಈ ಪ್ರಾಧಿಕಾರದಲ್ಲಿ ಲಭ್ಯವಿರುವ ದಾಖಲಾತಿಗಳಿಂದ ಪ್ರಥಮ ಮಾಹಿತಿ ವರದಿ, ಹಾಗೂ ಅಬಕಾರಿ ಉಪ ನಿರೀಕ್ಷಕರು, ಸಂಚಾರಿದಳ, ವಿರಾಜಪೇಟೆ ರವರ ವರದಿಯನ್ನು ಪರಿಶೀಲನೆ ಮಾಡಿದಲ್ಲಿ ಮಾರುತಿ ವ್ಯಾನ್ ಸಂಖ್ಯೆ: ಕೆಎಲ್-5-9943 ಆರೋಪಿಯು ಅಕ್ರಮವಾಗಿ 350 ಲೀ. ಮದ್ಯಸಾರಗಳನ್ನು ಸಾಗಾಣಿಕೆ ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ. ಸ್ವತಃ ವಾಹನ ಮಾಲೀಕರೇ ಈ ಕಾನೂನು ಬಾಹಿರ ಕೃತ್ಯವನ್ನು ಎಸಗಿರುತ್ತಾರೆಂದು ಈ ಪ್ರಾಧಿಕಾರವು ತೀರ್ಮಾನಕ್ಕೆ ಬರಬೇಕಾಗಿರುತ್ತದೆ. ವಾಹನವನ್ನು ತೆರೆದ ಪ್ರದೇಶದಲ್ಲಿ ಅದು ಬಿಸಿಲು, ಮಳೆ, ಹವಾಮಾನ ವೈಪರೀತ್ಯಗಳಿಗೆ ವಾಹನವು ದಿನೇದಿನೇ ತನ್ನ ಗುಣಮಟ್ಟವನ್ನು ಕಳೆದುಕೊಳ್ಳುವ ಸಂಭವವಿದ್ದು, ಅದರ ಮೌಲ್ಯವು ಕಡಿಮೆಯಾಗುವ ಸಾಧ್ಯತೆ ಇರುವುದರಿಂದ ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಮಾರುತಿ ವ್ಯಾನ್ ಸಂಖ್ಯೆ: ಕೆಎಲ್-5-9943 ರನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಈ ಪ್ರಾಧಿಕಾರವು ತೀರ್ಮಾನಿಸಿ ಈ ಕೆಳಗಿನಂತೆ ಆದೇಶ.

**ಆದೇಶ ನಂ: ಇಎಕ್ಸ್‌ಇ:3:ಡಿಟಿಸಿಆರ್‌ಎಂ:10/2004-05, ದಿನಾಂಕ: 5ನೇ ಫೆಬ್ರವರಿ 2005**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳನ್ನು ಪರಿಶೀಲಿಸಲಾಗಿ ಮಹಮದ್ ಇಲಿಯಾಸ್ ಅಹಮದ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ ಆದ ನಾನು ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965ರ ಕಲಂ 43ಎ ರ ಅಡಿಯಲ್ಲಿ ಸರ್ಕಾರದಿಂದ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ಉಪ ನಿರೀಕ್ಷಕರು, ಸಂಚಾರಿದಳ, ವಿರಾಜಪೇಟೆ ರವರ ಮೊಕದ್ದಮೆ ಸಂಖ್ಯೆ: 3/2004-05, ದಿನಾಂಕ: 10.8.2004 ರಲ್ಲಿ ವಶಪಡಿಸಿಕೊಂಡ ಮಾರುತಿ ವ್ಯಾನ್ ಸಂಖ್ಯೆ: ಕೆಎಲ್-5-9943 ರನ್ನು ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 43(ಎ)(2) ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ: 5.2.2005 ರಂದು ಶೀಘ್ರಲಿಪಿಗಾರರಿಗೆ ಉಕ್ತಲೇಖನ ಕೊಟ್ಟು ಬೆರಳಚ್ಚು ಮಾಡಿಸಿ ಕಂಪ್ಯೂಟರಿನಲ್ಲಿ ಮುದ್ರಿಸಿ, ಪ್ರತಿಯನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶ ಆದ 30 ದಿನಗಳ ನಂತರ ಮುಟ್ಟುಗೋಲು ಹಾಕಿಕೊಂಡ ವಾಹನವನ್ನು ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ ರವರ ಅನುಮೋದನೆಯನ್ನು ಪಡೆದು ಬಹಿರಂಗ ಹರಾಜು ಮೂಲಕ ಕರ್ನಾಟಕ ರಾಜ್ಯ ಅಬಕಾರಿ (ಮುಟ್ಟುಗೋಲು ಹಾಕಿಕೊಂಡ ವಸ್ತುಗಳ ವಿಲೇವಾರಿ) 1967ರ ನಿಯಮದಂತೆ ವಿಲೇವಾರಿ ಮಾಡಲಾಗುವುದೆಂದು ಆದೇಶಿಸಿದೆ.

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್,
ಕೊಡಗು ಜಿಲ್ಲೆ, ಮಡಿಕೇರಿ.

ಪಿ.ಆರ್. 480

**ಡೆಪ್ಯುಟಿ ಕಮಿಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ - ಇವರ ನ್ಯಾಯಾಲಯ**

| | |
|---|---|
| **ಫಿರ್ಯಾದುದಾರರು:** | **ಪ್ರತಿವಾದಿಗಳು:** |
| ಅಬಕಾರಿ ಉಪ ನಿರೀಕ್ಷಕರು, | ರಮೇಶ್ ಬಿನ್ ವೆಂಕಟಪ್ಪ |
| ಮಂಡ್ಯ ಉಪ ವಲಯ | ಮನೆ ನಂ.3343, 7ನೇ ಕ್ರಾಸ್, ಬೋವಿ ಕಾಲೋನಿ, ಮಂಡ್ಯ ಸಿಟಿ. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 6.10.2004 ರಂದು ಬೆಳಗಿನ ಜಾವ 5.00 ಗಂಟೆಯಲ್ಲಿ ಅಬಕಾರಿ ಉಪ ನಿರೀಕ್ಷಕರು, ಮಂಡ್ಯ ಉಪ ವಲಯ - ಇವರು ಮಂಡ್ಯ ಸಿಟಿ, ಬೋವಿ ಕಾಲೋನಿ, 7ನೇ ಕ್ರಾಸ್‌ನಲ್ಲಿ ವಾಸವಾಗಿರುವ ರಮೇಶ್ ಬಿನ್ ವೆಂಕಟಪ್ಪನವರ ಮನೆಯ ಮುಂಭಾಗದಲ್ಲಿ ವಾಹನ ಅಂಬಾಸಿಡರ್ ಕಾರ್ ಸಂಖ್ಯೆ: ಸಿಆರ್‌ಡಬ್ಲ್ಯೂ-8558 ರಲ್ಲಿ ಅಕ್ರಮವಾಗಿ 17.280 ಲೀ. (ಹೊರರಾಜ್ಯದ) ಮದ್ಯವನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದುದನ್ನು ಪತ್ತೆಹಚ್ಚಿ ವಾಹನ ಮತ್ತು ಮದ್ಯವನ್ನು ಜಪ್ತು ಮಾಡಿ ಪ್ರಕರಣ ಸಂಖ್ಯೆ: 3/2004-05 ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ ಕಲಂ 32, 34 ಮತ್ತು 43(ಎ) ರಂತೆ ಕ್ರಮ ಜರುಗಿಸಿರುತ್ತಾರೆ.

ತದನಂತರ ಪ್ರಕರಣದ ತನಿಖೆಯನ್ನು ಆರಂಭಿಸಿ ಮದ್ಯದ ಮಾದರಿಯನ್ನು ರಾಸಾಯನಿಕ ತಜ್ಞರ ವಿಶ್ಲೇಷಣೆಗೆ ಒಳಪಡಿಸಿದ್ದು, ಜಪ್ತುಪಡಿಸಿರುವ ದ್ರವವು ಮದ್ಯವೆಂದು ಮತ್ತು ಮಾನವ ಸೇವನೆಗೆ ಯೋಗ್ಯವಾಗಿದೆಯೆಂದು ರಾಸಾಯನಿಕ ತಜ್ಞರ ವರದಿಯಿಂದ ದೃಢಪಟ್ಟಿರುತ್ತದೆ.

ದಿನಾಂಕ: 17.12.2004 ರಂದು ವಾಹನವನ್ನು ಜಪ್ತು ಪಡಿಸುವಾಗ ಹಾಜರಿದ್ದ ಅಪರಾಧಿಗೆ ಕಾರಣ ಕೇಳಿ ನೋಟೀಸನ್ನು ನೋಂದಣಿ ಅಂಚೆ ಮೂಲಕ ಕಳುಹಿಸಲಾಗಿ, ಸದರಿ ನೋಟೀಸು ಅಂಚೆ ಇಲಾಖೆಯವರಿಂದ “Not Claimed” ಎಂಬ ಷರಾದೊಂದಿಗೆ ಹಿಂದಿರುಗಿ ಬಂದಿರುತ್ತದೆ. ಅಲ್ಲದೆ ಕಾರಣಕೇಳಿ ನೋಟೀಸನ್ನು ವಲಯದ ನಿರೀಕ್ಷಕರ ಮೂಲಕ ಜಾರಿ ಮಾಡಲು ಸಹಾ ಪ್ರಯತ್ನಿಸಲಾಗಿ ಅಪರಾಧಿಯು ನೋಟೀಸನ್ನು ತಿರಸ್ಕರಿಸಿರುತ್ತಾರೆ.

ಈ ಪ್ರಕರಣವು ದಾಖಲಾಗಿ (4) ತಿಂಗಳ ಅವಧಿ ಕಳೆದಿದ್ದರೂ ಯಾವುದೇ ವ್ಯಕ್ತಿಯು ಪ್ರಾಧಿಕಾರದ ಮುಂದೆ ಹಾಜರಾಗಿ ಜಪ್ತು ಪಡಿಸಲಾಗಿರುವ ವಾಹನ ತನ್ನದೆಂದು ಕೋರಿ ಯಾವುದೇ ಅರ್ಜಿಯನ್ನು ಸಲ್ಲಿಸಿ ವಾಹನದ ಹಕ್ಕನ್ನು ಚಲಾಯಿಸಿ ವಾಹನದ ಬಿಡುಗಡೆಗೆ ಪ್ರಯತ್ನಿಸಿರುವುದಿಲ್ಲ.

ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಪ್ರಕರಣವನ್ನು ದಾಖಲು ಪಡಿಸುವಾಗ ಅಪರಾಧಿಯು ಪತ್ತೆಯಾಗದಿದ್ದಲ್ಲಿ ತದನಂತರ ಪತ್ತೆಯಾಗುವ ಸಾಧ್ಯತೆಗಳು ಇಲ್ಲದಿದ್ದಲ್ಲಿ, ಪ್ರಕರಣವನ್ನು ಪತ್ತೆ ಹಚ್ಚಿ ಒಂದು (1) ತಿಂಗಳೊಳಗೆ ಯಾವುದೇ ವ್ಯಕ್ತಿಯು ಪ್ರಾಧಿಕಾರದ ಮುಂದೆ ಹಾಜರಾಗಿ ಸ್ವತ್ತುಗಳು ತಮ್ಮದ್ದೆಂದೂ ಅವುಗಳು ಕಾನೂನು ಬದ್ಧವಾಗಿವೆಯೆಂದು ಸೂಕ್ತ ಸಾಕ್ಷ್ಯಾಧಾರಗಳೊಂದಿಗೆ ಹಾಜರಾಗದೇ ಇದ್ದಲ್ಲಿ ಸದರಿ ಸ್ವತ್ತುಗಳು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಸ್ವತ್ತುಗಳಾಗಿದ್ದಲ್ಲಿ ಅಂತಹ ಅಬಕಾರಿ ವಸ್ತುಗಳನ್ನು ಮತ್ತು ಅಕ್ರಮ ಮದ್ಯ ಸಾಗಣೆಗೆ ಉಪಯೋಗಿಸಲಾದ ವಾಹನವನ್ನು ಸರ್ಕಾರಕ್ಕೆ ವಶಪಡಿಸಿಕೊಳ್ಳಬಹುದಾಗಿದೆ.

ಈ ಪ್ರಕರಣವನ್ನು ದಾಖಲಿಸಿ ನಾಲ್ಕು (4) ತಿಂಗಳು ಕಳೆದಿದ್ದರೂ ಯಾವುದೇ ವ್ಯಕ್ತಿಯು ಪ್ರಾಧಿಕಾರದ ಮುಂದೆ ಹಾಜರಾಗಿ ವಾಹನವನ್ನು ತನ್ನದೆಂದು ಕೋರಿ ಅರ್ಜಿ ಸಲ್ಲಿಸಿಲ್ಲದಿರುವುದನ್ನು ಗಮನಿಸಿದಾಗ ವಾಹನ ಮಾಲೀಕನ ತಿಳುವಳಿಕೆಯಿಂದಲೇ ಅಕ್ರಮವಾಗಿ ಮದ್ಯದ ಸಾಗಾಣಿಕೆ ನಡೆದಿದೆ ಎಂದು ನಂಬಬೇಕಾಗಿರುತ್ತದೆ. ಈ ಪ್ರಕರಣದ ಆರೋಪಿಯು ತನಗೆ ನೀಡಲಾದ ಕಾರಣಕೇಳುವ ನೋಟೀಸನ್ನು ತಿರಸ್ಕರಿಸಿದ್ದು ಇದಕ್ಕೆ ಪುಷ್ಟಿ ನೀಡುತ್ತದೆ. ಅಲ್ಲದೇ ದಿನಾಂಕ: 6.10.2004 ರಂದು ಅಬಕಾರಿ ಉಪ ನಿರೀಕ್ಷಕರು, ಮಂಡ್ಯ ಉಪ ವಲಯ - ಇವರು ಅಕ್ರಮ ಮದ್ಯವನ್ನು ಸಾಗಣೆ ಪತ್ತೆಹಚ್ಚಿ ಸ್ಥಳ ಮಹಜರಿನ ಮೂಲಕ ಮದ್ಯವನ್ನು ಹಾಗೂ ವಾಹನವನ್ನು ಜಪ್ತು ಪಡಿಸಿದ್ದು ತೆಗೆಯಲಾಗಿರುವ ಮಾದರಿಯು ರಾಸಾಯನಿಕ ತಜ್ಞರ ವರದಿಯಂತೆ ಮದ್ಯವೆಂದು ದೃಢಪಟ್ಟಿರುವುದರಿಂದ ಈ ಅಕ್ರಮ ಮದ್ಯ ಸಾಗಣೆಯಾಗಿರುವುದು ಸಾಬೀತಾಗಿರುತ್ತದೆ. ಅಲ್ಲದೇ ವಾಹನವನ್ನು ತೆರದ ಜಾಗದಲ್ಲಿ ನಿಲ್ಲಿಸಿದ್ದು ಬಿಸಿಲು, ಮಳೆ ಮುಂತಾದ ಪ್ರಾಕೃತಿಕ ವೈಪರೀತ್ಯಕ್ಕೆ ಒಳಗಾಗಿ ದಿನೇ ದಿನೇ ತನ್ನ ಗುಣಮಟ್ಟವನ್ನು ಕಳೆದುಕೊಂಡು ಅದರ ಮೌಲ್ಯವು ಕಡಿಮೆಯಾಗುವ ಸಾಧ್ಯತೆಯಿರುವುದರಿಂದ ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಈ ಪ್ರಕರಣದಲ್ಲಿ ಜಪ್ತುಪಡಿಸಿರುವ ವಾಹನ ಅಂಬಾಸಿಡರ್ ಕಾರ್ ಸಂಖ್ಯೆ: ಸಿಆರ್‌ಡಬ್ಲ್ಯೂ-8558ನ್ನು ಮತ್ತು ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡ ಮದ್ಯವು ರಾಜ್ಯದಲ್ಲಿ ಮಾರಾಟಕ್ಕೆ ನಿಷಿದ್ಧವಿರುವುದರಿಂದ ನಾಶಪಡಿಸುವುದು ಸೂಕ್ತವೆಂದು ಪ್ರಾಧಿಕಾರಕ್ಕೆ ಮನದಟ್ಟಾಗಿರುವುದರಿಂದ ಈ ಕೆಳಕಂಡ ಆದೇಶ.

**ಆದೇಶ ನಂ: ಡಿಟಿಸಿಆರ್/45/04-05, ದಿನಾಂಕ: 24ನೇ ಫೆಬ್ರವರಿ 2005**

ಮೇಲ್ಕಂಡ ವಾಸ್ತವಾಂಶಗಳ ಹಿನ್ನೆಲೆಯಲ್ಲಿ ಗೋವಿಂದಪ್ಪ, ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ - ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43(ಬಿ)ರ ಅಡಿಯಲ್ಲಿ ಅನುಸರಿಸಬೇಕಾದ ವಿಧಿವಿಧಾನಗಳನ್ನು ಅನುಸರಿಸಿ ಅಬಕಾರಿ ಉಪ ನಿರೀಕ್ಷಕರು, ಉಪ ವಲಯ, ಮಂಡ್ಯ - ರವರ ಪ್ರ.ಮಾ.ವ. ಸಂಖ್ಯೆ:3/2004-05, ದಿನಾಂಕ: 6.10.2004 ರಲ್ಲಿ ವಶಪಡಿಸಿಕೊಂಡ ವಾಹನ ಅಂಬಾಸಿಡರ್ ಕಾರ್ ಸಂಖ್ಯೆ: ಸಿಆರ್‌ಡಬ್ಲ್ಯೂ-8558ನ್ನು ಮತ್ತು 17.280 ಲೀ. ಮದ್ಯವನ್ನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43(ಎ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ, ಜಪ್ತುಪಡಿಸಿರುವ ಮದ್ಯವು ಮಾನವ ಸೇವನೆಗೆ ಯೋಗ್ಯವಾದರೂ ಕರ್ನಾಟಕ ರಾಜ್ಯದಲ್ಲಿ ಮಾರಾಟಕ್ಕೆ ನಿಷಿದ್ಧವಾದ್ದರಿಂದ ಕಲಂ 43(ಎ) 2ರ ಅಡಿಯಲ್ಲಿ ನಾಶಪಡಿಸಲು ಆದೇಶಿಸಿದೆ.

ಆದೇಶವನ್ನು ಇಂದು ಅಂದರೆ ದಿನಾಂಕ: 24.02.2005 ರಂದು ಗಣಕಯಂತ್ರದಲ್ಲಿ ಬೆರಳಚ್ಚು ಮಾಡಿಸಿ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು,
ಮಂಡ್ಯ ಜಿಲ್ಲೆ, ಮಂಡ್ಯ.

ಪಿ.ಆರ್. 481

**ಡೆಪ್ಯುಟಿ ಕಮಿಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ - ಇವರ ನ್ಯಾಯಾಲಯ**

**ಸಂಖ್ಯೆ: ಇಎಕ್ಸ್‌ಇ:3:ಡಿಟಿಸಿಆರ್‌ಎಂ:10/2004-05, ದಿನಾಂಕ: 5ನೇ ಫೆಬ್ರವರಿ 2005**

**ಫಿರ್ಯಾದುದಾರರು:**
ಆರಕ್ಷಕ ಉಪ ನಿರೀಕ್ಷಕರು,
ಪಶ್ಚಿಮ ಪೊಲೀಸ್ ಠಾಣೆ,
ಮಂಡ್ಯ.

**ಪ್ರತಿವಾದಿಗಳು:**
1) ಗೋಪಿ ಬಿನ್ ಕೆ.ಟಿ. ವೆಂಕಟೇಗೌಡ,
ಹೌಸಿಂಗ್ ಬೋರ್ಡ್, ಚಾನೆಲ್ ಪಕ್ಕದ ಮನೆ, ಮಂಡ್ಯ.
2) ಪ್ರದೀಪ್ ಕುಮಾರ್ ಬಿನ್ ಕೃಷ್ಣಸ್ವಾಮಿ,
ದೊಡ್ಡ ಬಾಣಸವಾಡಿ, ಕೆರಗೋಡು ಹೋಬಳಿ, ಮಂಡ್ಯ ತಾಲ್ಲೂಕು.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 12.10.2004 ರಂದು ಮಧ್ಯಾಹ್ನ 4.30 ಗಂಟೆಯಲ್ಲಿ ಆರಕ್ಷಕ ಉಪ ನಿರೀಕ್ಷಕರು, ಪಶ್ಚಿಮ ಪೊಲೀಸ್ ಠಾಣೆ, ಮಂಡ್ಯ, ಮೈಸೂರು-ಬೆಂಗಳೂರು ಮುಖ್ಯ ರಸ್ತೆ, ಮಂಡ್ಯ ಪ್ರವಾಸಿ ಮಂದಿರದ ಮುಂಭಾಗದಲ್ಲಿ ವಾಹನ ಅಂಬಾಸಿಡರ್ ಕಾರ್ ಸಂಖ್ಯೆ ಸಿಎನ್‌ಜೆಡ್-1947 ರಲ್ಲಿ 14 ಲೀ. ಸಾರಾಯಿಯನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದುದನ್ನು ಪತ್ತೆಹಚ್ಚಿ ವಾಹನ ಮತ್ತು ಸಾರಾಯಿಯನ್ನು ಜಪ್ತು ಮಾಡಿ ಪ್ರಕರಣ ಸಂಖ್ಯೆ 173/2004 ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ ಕಲಂ 32 ಮತ್ತು 34 ರಂತೆ ಕ್ರಮ ಜರುಗಿಸಿರುತ್ತಾರೆ.

ಅಬಕಾರಿ ನಿರೀಕ್ಷಕರು, ಮಂಡ್ಯ ವಲಯ - ಇವರು ಪ್ರಕರಣವನ್ನು ತನಿಖೆಗೊಳಪಡಿಸಿ ಜಪ್ತು ಪಡಿಸಲಾದ ಮಾದರಿಗಳನ್ನು ರಸಾಯನಿಕ ವಿಶ್ಲೇಷಣೆಗೊಳಪಡಿಸಿದ್ದು ಜಪ್ತುಗೊಳಿಸಿದ ದ್ರವವು ಸಾರಾಯಿ ಎಂದು ರಾಸಾಯನಿಕ ತಜ್ಞರ ವರದಿಯಿಂದ ದೃಢಪಟ್ಟಿದ್ದು ಪ್ರಕರಣವು ದಾಖಲಾಗಿ ನಾಲ್ಕು (4) ತಿಂಗಳು ಕಳೆದಿದ್ದರೂ ಯಾವುದೇ ವ್ಯಕ್ತಿಯು ವಾಹನವನ್ನು ತನ್ನದೆಂದು ಕೋರಿ ಹಕ್ಕು ಚಲಾಯಿಸಿರುವುದಿಲ್ಲವೆಂದು ಈ ಕಾರಣದಿಂದಾಗಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ವರದಿಯನ್ನು ಸಲ್ಲಿಸಿರುತ್ತಾರೆ, ಹಾಗೂ ಜಪ್ತು ಪಡಿಸಿದ್ದ ಸಾರಾಯಿ ಪೊಟ್ಟಣಗಳು ಊದಿಕೊಂಡಿದ್ದು ಮಾರಾಟಕ್ಕೆ ಯೋಗ್ಯವಾಗಿಲ್ಲದ ಕಾರಣ ಸಾರಾಯಿಯನ್ನು ನಾಶಪಡಿಸಲು ಆದೇಶ ನೀಡಬೇಕೆಂದು ಕೋರಿರುತ್ತಾರೆ.

ದಿನಾಂಕ: 17.12.2004 ರಂದು ಈ ಪ್ರಾಧಿಕಾರವು ಪ್ರಕರಣವನ್ನು ಪತ್ತೆಹಚ್ಚುವಲ್ಲಿ ದಸ್ತಗಿರಿ ಮಾಡಲಾದ ಅಪರಾಧಿಗಳಿಗೆ ಕಾರಣಕೇಳಿ ನೋಟೀಸನ್ನು ನೀಡಲಾಗಿದ್ದು, ನೀಡಲಾದ ನೋಟೀಸು 1ನೇ ಅಪರಾಧಿ ಗೋಪಿ ಬಿನ್ ವೆಂಕಟೇಗೌಡ - ಇವರಿಗೆ ಸ್ವೀಕೃತವಾಗದೇ ಹಿಂದೆ ಬಂದಿರುತ್ತದೆ. 2ನೇ ಆರೋಪಿಗೆ ಕಾರಣ ಕೇಳುವ ನೋಟೀಸು ಜಾರಿಯಾಗಿರುತ್ತದೆ, ಜಾರಿಯಾಗಿದ್ದಕ್ಕೆ ಸ್ವೀಕೃತಿ ಪ್ರಾಧಿಕಾರಕ್ಕೆ ತಲುಪಿರುತ್ತದೆ.

ಈ ಪ್ರಕರಣವು ದಾಖಲಾಗಿ ನಾಲ್ಕು (4) ತಿಂಗಳ ಅವಧಿ ಕಳೆದಿದ್ದರೂ ಹಾಗೂ ಪ್ರಕರಣದ ಆರೋಪಿಗೆ ಕಾರಣಕೇಳಿ ನೀಡಲಾಗಿದ್ದ ನೋಟೀಸು ಜಾರಿಯಾಗಿದ್ದರೂ ಇಂದಿನವರೆಗೂ ಯಾವುದೇ ವ್ಯಕ್ತಿಯು ಪ್ರಾಧಿಕಾರದ ಮುಂದೆ ಹಾಜರಾಗಿ ಜಫ್ತುಪಡಿಸಲಾಗಿರುವ ವಾಹನ ತನ್ನದೆಂದು ಕೋರಿ ಅಧಿಕಾರ ಚಲಾಯಿಸಿ ಯಾವುದೇ ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಪ್ರಕರಣವನ್ನು ದಾಖಲಿಸುವಲ್ಲಿ ಅಪರಾಧಿಯು ಪತ್ತೆಯಾಗದಿದ್ದಲ್ಲಿ ತದನಂತರ ಪತ್ತೆಯಾಗುವ ಸಾಧ್ಯತೆಗಳು ಇಲ್ಲದಿದ್ದಲ್ಲಿ, ಪ್ರಕರಣವನ್ನು ಪತ್ತೆ ಹಚ್ಚಿ ವಸ್ತುಗಳನ್ನು ಜಫ್ತುಪಡಿಸಿದ ಒಂದು (1) ತಿಂಗಳೊಳಗೆ ಯಾವುದೇ ವ್ಯಕ್ತಿಯು ಪ್ರಾಧಿಕಾರದ ಮುಂದೆ ಹಾಜರಾಗಿ ಸ್ವತ್ತುಗಳು ತಮ್ಮದೆಂದೂ ಅವುಗಳು ಕಾನೂನು ಬದ್ಧವಾಗಿವೆಯೆಂದು ಸೂಕ್ತ ಸಾಕ್ಷ್ಯಾಧಾರಗಳೊಂದಿಗೆ ಹಾಜರಾಗದೇ ಇದ್ದಲ್ಲಿ ಸದರಿ ಸ್ವತ್ತುಗಳು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಸ್ವತ್ತುಗಳಾಗಿದ್ದಲ್ಲಿ ಅಂತಹ ವಸ್ತುಗಳನ್ನು ಮತ್ತು ಅಕ್ರಮ ಮದ್ಯ ಸಾಗಣೆಗೆ ಉಪಯೋಗಿಸಲಾದ ವಾಹನವನ್ನು ಸರ್ಕಾರಕ್ಕೆ ವಶಪಡಿಸಿಕೊಳ್ಳಬಹುದಾಗಿದೆ.

ಈ ಪ್ರಕರಣವನ್ನು ದಾಖಲಾತಿಗಳಲ್ಲಿ ಕೂಲಂಕುಶವಾಗಿ ಪರಿಶೀಲಿಸಲಾಗಿದೆ. ಪ್ರಕರಣ ದಾಖಲಿಸಿ ನಾಲ್ಕು (4) ತಿಂಗಳು ಕಳೆದಿರುತ್ತದೆ. ಹಾಗೂ ಪ್ರಕರಣದ ಆರೋಪಿಗೆ ಕಾರಣ ಕೇಳಿ ನೋಟೀಸು ನೀಡಿದ್ದರೂ ಇಲ್ಲಿಯ ತನಕ ಯಾವುದೇ ವ್ಯಕ್ತಿಯು ಪ್ರಾಧಿಕಾರದ ಮುಂದೆ ಹಾಜರಾಗಿ ವಾಹನವನ್ನು ತನ್ನದೆಂದು ಕೋರಿ ಅರ್ಜಿ ಸಲ್ಲಿಸಿಲ್ಲದಿರುವುದನ್ನು ಗಮನಿಸಿದಾಗ ವಾಹನ ಮಾಲೀಕನ ತಿಳುವಳಿಕೆಯಿಂದಲೇ ಈ ಅಕ್ರಮ ನಡೆದಿದೆ ಎಂದು ಪ್ರಾಧಿಕಾರವು ಭಾವಿಸಬೇಕಾಗುತ್ತದೆ, ಅಲ್ಲದೇ ದಿನಾಂಕ: 12.10.2004 ರಂದು ಆರಕ್ಷಕ ಉಪ ನಿರೀಕ್ಷಕರು ಮಂಡ್ಯ ಸಿಟಿ ಪಶ್ಚಿಮ ಠಾಣೆ - ಇವರು ಅಕ್ರಮ ಸಾರಾಯಿ ಸಾಗಣೆಯಾಗುತ್ತಿದ್ದುದನ್ನು ಪತ್ತೆಹಚ್ಚಿ ಸ್ಥಳ ಮಹಜರಿನೊಂದಿಗೆ ಅಕ್ರಮ ಸಾರಾಯಿ ಹಾಗೂ ವಾಹನವನ್ನು ಜಫ್ತುಪಡಿಸಿರುತ್ತಾರೆ. ಜಫ್ತು ಪಡಿಸಲಾದ ದ್ರವದ ಮಾದರಿಯು ರಾಸಾಯನಿಕ ತಜ್ಞರ ವರದಿಯಂತೆ ಸಾರಾಯಿಯೆಂದು ದೃಢಪಟ್ಟಿರುವುದರಿಂದ ಈ ಅಕ್ರಮ ಸಾರಾಯಿ ಸಾಗಣೆ ಮಾಡಿರುವುದು ಸಾಬೀತಾಗಿರುತ್ತದೆ, ಅಂತೆಯೇ

ವಾಹನವನ್ನು ತೆರೆದ ಜಾಗದಲ್ಲಿ ನಿಲ್ಲಿಸಿದ್ದು ವಾಹನವು ಬಿಸಿಲು ಮಳೆ ಮುಂತಾದ ಪ್ರಾಕೃತಿಕ ವೈಪರೀತ್ಯಕ್ಕೆ ಒಳಗಾಗಿ ದಿನೇ ದಿನೇ ತನ್ನ ಗುಣಮಟ್ಟವನ್ನು ಕಳೆದುಕೊಳ್ಳುತ್ತಿದ್ದು ಅದರ ಮೌಲ್ಯವು ಕಡಿಮೆಯಾಗುವ ಸಾಧ್ಯತೆಯಿರುವುದರಿಂದ ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಈ ಪ್ರಕರಣದಲ್ಲಿ ಜಫ್ತುಪಡಿಸಿರುವ ವಾಹನ ಅಂಬಾಸಿಡರ್ ಕಾರ್ ಸಂಖ್ಯೆ: ಸಿಎನ್‌ಜೆಡ್-1941ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದೇ ಸೂಕ್ತವೆಂದು ಪ್ರಾಧಿಕಾರಕ್ಕೆ ಮನದಟ್ಟಾಗಿರುವುದರಿಂದ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43(ಎ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಹಾಗೂ 14 ಲೀ. ಸಾರಾಯಿಯ ಗುಣಮಟ್ಟ ಕಡಿಮೆಯಿದ್ದು ಮಾನವ ಸೇವನೆಗೆ ಯೋಗ್ಯವಾಗಿರದ ದೃಷ್ಟಿಯಲ್ಲಿ ಸಾರಾಯಿಯನ್ನು ಕಲಂ 43(ಎ)2ರ ಅನ್ವಯ ನಾಶಪಡಿಸುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ನಂ: ಡಿಟಿಸಿಆರ್/57/04-05, ದಿನಾಂಕ: 24ನೇ ಫೆಬ್ರವರಿ 2005**

ಮೇಲ್ಕಂಡ ವಾಸ್ತವಾಂಶಗಳ ಹಿನ್ನೆಲೆಯಲ್ಲಿ ಗೋವಿಂದಪ್ಪ, ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ - ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43(ಬಿ)ರ ಅಡಿಯಲ್ಲಿ ಅನುಸರಿಸಬೇಕಾದ ವಿಧಿವಿಧಾನಗಳನ್ನು ಅನುಸರಿಸಿ ಆರಕ್ಷಕ ಉಪ ನಿರೀಕ್ಷಕರು, ಪಶ್ಚಿಮ ಪೊಲೀಸ್ ಠಾಣೆ, ಮಂಡ್ಯ - ರವರ ಪ್ರ.ಮಾ.ವ. ಸಂಖ್ಯೆ:173/2004, ದಿನಾಂಕ: 12.10.2004 ರಲ್ಲಿ ವಶಪಡಿಸಿಕೊಂಡ ವಾಹನ ಅಂಬಾಸಿಡರ್ ಕಾರ್ ಸಂಖ್ಯೆ: ಸಿಎನ್‌ಜೆಡ್-1947ನ್ನು ಮತ್ತು 14 ಲೀ. ಸಾರಾಯಿಯನ್ನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43(ಎ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ, ಹಾಗೂ ಸಾರಾಯಿಯನ್ನು ಕಲಂ 43(ಎ) 2ರ ಅಡಿಯಲ್ಲಿ ನಾಶಪಡಿಸಲು ಆದೇಶಿಸಿದೆ.

ಆದೇಶವನ್ನು ಇಂದು ಅಂದರೆ ದಿನಾಂಕ: 24.02.2005 ರಂದು ಗಣಕಯಂತ್ರದಲ್ಲಿ ಬೆರಳಚ್ಚು ಮಾಡಿಸಿ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು,
ಮಂಡ್ಯ ಜಿಲ್ಲೆ, ಮಂಡ್ಯ.

ಪಿ.ಆರ್. 482

**ಕಂದಾಯ ಇಲಾಖೆ**

**ತಹಶೀಲ್ದಾರ್‌ರವರ ಕಾರ್ಯಾಲಯ, ಭದ್ರಾವತಿ ತಾಲ್ಲೂಕು, ಭದ್ರಾವತಿ**

**ಸಂಖ್ಯೆ: ಬಿ.ಎಸ್. ಸಿಆರ್ 117:90-91**

**ನಮೂನೆ-27**

ಕರ್ನಾಟಕ ಭೂಕಂದಾಯ ಕಾಯಿದೆ 1964ರ ಅಧಿನಿಯಮ 94ನೇ 68 (1)ನೇ ಪ್ರಕರಣದ ಮೇರೆಗೆ ಕರ್ನಾಟಕ ಭೂಕಂದಾಯ 1966ರ ನಿಯಮ 94ರ ಮೇರೆಗೆ

ಜಿಲ್ಲಾಧಿಕಾರಿಗಳು ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ರವರ ಪತ್ರ ಸಂಖ್ಯೆ: ಎಲ್‌ಎನ್‌ಡಿ (1) ಸಿಆರ್ 460:2001-02 ದಿನಾಂಕ: 26.9.2001.

ಸರ್ಕಾರದ ಸ್ವತ್ತಾಗಿರುವ ಹಾಗೂ ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಸಾರ್ವಜನಿಕ ಜಮೀನಿನ ಭಾಗವು ಸಾರ್ವಜನಿಕ ಉಪಯೋಗಕ್ಕೆ ಅಗತ್ಯವಿಲ್ಲವೆಂದು ರಾಜ್ಯ ಸರ್ಕಾರಕ್ಕೆ ಕಂಡುಬಂದಿರುವುದರಿಂದ

ಈಗ ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ 68ನೇ ಪ್ರಕರಣದ 1ನೇ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಸಾರ್ವಜನಿಕ ಜಮೀನಿನ ಸರ್ಕಾರಿ ಅಯ್ಯನ ಕೆರೆ ಸಾರ್ವಜನಿಕ ಉಪಯೋಗಕ್ಕೆ ಅಗತ್ಯವಿಲ್ಲವೆಂದು ಮತ್ತು ಸಾರ್ವಜನಿಕ ಸರ್ಕಾರಿ ಅಯ್ಯನ ಕೆರೆಯ ಸದರಿ ಭಾಗದಲ್ಲಿ ಮತ್ತು ಅದರ ಮೇಲೆ ಸಾರ್ವಜನಿಕರ ಹಾಗೂ ಎಲ್ಲಾ ವ್ಯಕ್ತಿಗಳ ಹಕ್ಕುಗಳು ಕೊನೆಗೊಳ್ಳತಕ್ಕದೆಂದು ಉದ್ದೇಶಿಸಿ ಈ ಮೂಲಕ ಘೋಷಿಸಿರುತ್ತದೆ.

ಸಾರ್ವಜನಿಕ ಸರ್ಕಾರಿ ಅಯ್ಯನ ಕೆರೆ ಹಕ್ಕಿನ ಜೊತೆ ಸದರಿ ಕೆರೆಯ ಭಾಗದಲ್ಲಿ ಅಥವಾ ಅದರ ಮೇಲೆ ಹಿತಾಸಕ್ತಿಯುಳ್ಳ ಅಥವಾ ಹಕ್ಕುಳ್ಳ ಅಥವಾ ಉದ್ದೇಶದಿಂದ ಪ್ರತಿಕೂಲ ಪರಿಣಾಮಕ್ಕೊಳಗಾಗುವ ಸಂಭವವಿರುವ ಇತರೆ ಯಾವುದೇ ಹಿತಾಸಕ್ತಿಯನ್ನು ಹೊಂದಿರುವ ಯಾವನೇ ಸಾರ್ವಜನಿಕನು ಅಥವಾ ಯಾವುದೇ ವ್ಯಕ್ತಿಯು ಈ ಅಧಿಸೂಚನೆಯನ್ನು ಹೊರಡಿಸಿದ 90 (ತೊಂಬತ್ತು) ದಿನಗಳೊಳಗಾಗಿ ಸದರಿ ಉದ್ದೇಶದ ಬಗ್ಗೆ ತನ್ನ ಆಕ್ಷೇಪಣೆಯನ್ನು ಅಥವಾ ಹಿತಾಸಕ್ತಿಯ ಅಥವಾ ಹಕ್ಕಿನ ಸ್ವರೂಪವನ್ನು ಮತ್ತು ಪ್ರತಿಕೂಲ ಪರಿಣಾಮವು ಸಂಭವಿಸಬಹುದಾದ ರೀತಿಯನ್ನು ಮತ್ತು ಅಂಥಾ ಹಿತಾಸಕ್ತಿ ಅಥವಾ ಹಕ್ಕಿನ ಬಗ್ಗೆ ನಷ್ಟ ಪರಿಹಾರಕ್ಕಾಗಿ ಕ್ಲೈಮ್ ಮಾಡಲಾದ ಮೊಬಲಗುಗಳು ಮತ್ತು ವಿವರವನ್ನು ಜಿಲ್ಲೆಯ ಜಿಲ್ಲಾಧಿಕಾರಿಗಳಿಗೆ (ಡೆಪ್ಯೂಟಿ ಕಮೀಷನರ್‌ರಿಗೆ) ಬರಹದಲ್ಲಿ ಕಳಿಸತಕ್ಕದ್ದು ಮತ್ತು ಸದರಿ ಆಕ್ಷೇಪಣೆಗಳನ್ನು ಮತ್ತು ಕ್ಲೇಮು ಇನ್ನು ಸದರಿ ಪ್ರಕರಣದಲ್ಲಿ ಉಪ ಸಂಬಂಧಿಸಿರುವಂತೆ ಜಿಲ್ಲಾಧಿಕಾರಿಗಳು (ಡೆಪ್ಯೂಟಿ ಕಮೀಷನರ್) ಪರಿಶೀಲಿಸಿರುತ್ತಾರೆ.

**ಅಧಿಸೂಚನೆ**

| | | |
|---|---|---|
| 1) | ಸರ್ಕಾರಿ ಅಯ್ಯನ ಕೆರೆ ಇರುವ ಗ್ರಾಮದ ಹೆಸರು | ಅರಹತೊಳಲು ಗ್ರಾಮ |
| 2) | ತಾಲ್ಲೂಕು | ಭದ್ರಾವತಿ |
| 3) | ಹೋಬಳಿ | ಹೊಳೆಹೊನ್ನೂರು |
| 4) | ಜಿಲ್ಲೆ | ಶಿವಮೊಗ್ಗ |
| 5) | ಸರ್ಕಾರಿ ಅಯ್ಯನಕೆರೆ ವಿವರ | ಸ.ನಂ.199 |
| 6) | ಸರ್ಕಾರಿ ಅಯ್ಯನಕೆರೆ ವಿಸ್ತೀರ್ಣ | 1-09 ಎಕರೆ |
| 7) | ಸರ್ಕಾರಿ ಅಯ್ಯನ ಕೆರೆಯ ಚಕ್ಕುಬಂದಿ | ಪೂ: ಸ.ನಂ. 92ರ ಜಮೀನು<br>ಪ : ಸ.ನಂ. 199ರ ಉಳಿದ ಜಾಗ<br>ಉ: ಚನ್ನಗಿರಿಗೆ ಹೋಗುವ ರಸ್ತೆ<br>ದ : ಸ.ನಂ. 84ರ ಜಮೀನು |
| 8) | ಸಾರ್ವಜನಿಕ ಸರ್ಕಾರಿ ಅಯ್ಯನ ಕೆರೆ ಅಥವಾ ಅದರ ಜಾಗ. | ಸರ್ಕಾರಿ ಅಯ್ಯನಕೆರೆ 4-09 ಎಕರೆ ಅಥವಾ ಅದರ ಭಾಗ |

ಪಿ.ಆರ್. 483 ತಹಸೀಲ್ದಾರ್, ಭದ್ರಾವತಿ ತಾಲ್ಲೂಕು.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರು (ನಿ.441) ಹಾಗೂ ವಸೂಲಾಧಿಕಾರಿಗಳ ನ್ಯಾಯಾಲಯ, ಕ.ರಾ.ಸ.ಪ. ಬ್ಯಾಂಕುಗಳ ಮಹಾಮಂಡಳ ನಿ., ನಂ.132, ಕೆ.ಹೆಚ್. ರಸ್ತೆ, ಬೆಂಗಳೂರು-560 027**

**ವಿಷಯ:** ಶ್ರೀ ಸುಬ್ರಮಣ್ಯೇಶ್ವರ ಕೋ-ಆಪರೇಟಿವ್ ಬ್ಯಾಂಕ್ ಲಿ., ಬೆಂಗಳೂರು ಇದರ ಅಮಲ್ಜಾರಿ ಸಂಖ್ಯೆ: ಎಆರ್‌ಬಿ-II(45) ಸಿ.ಇ.ಪಿ:430:2002-2003 ಶ್ರೀ ಎಸ್.ಕೆ. ನವೀನ್ ಮತ್ತು ಶ್ರೀ ಎಸ್.ಟಿ. ಕೃಷ್ಣಪ್ಪ ರವರ ಸ್ಥಿರಾಸ್ತಿ ಸಂಖ್ಯೆ: ನಂ.627, ಅವೆನ್ಯೂ ರಸ್ತೆ, ಬೆಂಗಳೂರು ಈ ಸ್ಥಿರಾಸ್ತಿಯನ್ನು ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960 ನಿಯಮ 38(6)(ಎ) ರನ್ವಯ ಮಾರಾಟ ಸ್ಥಿರೀಕರಣಗೊಳಿಸುವ ಬಗ್ಗೆ.

**ಉಲ್ಲೇಖ:**
1) ದಾವಾ ಸಂಖ್ಯೆ: ಡಿಆರ್‌ಬಿ-1:ಡಿಐಎಸ್:975:99-2000.
2) ಅಮಲ್ಜಾರಿ ಸಂಖ್ಯೆ: ಎಆರ್‌ಬಿ-11(45) ಸಿ.ಇ.ಪಿ:430:2002-2003.
3) ಮಾರಾಟಾಧಿಕಾರಿಯವರ ವರದಿ ದಿನಾಂಕ: 10.03.2005.

**ಪ್ರಸ್ತಾವನೆ:**

ಶ್ರೀ ಎಸ್.ಕೆ. ನವೀನ್ ಬಿನ್ ಶ್ರೀ ಎಸ್.ಟಿ. ಕೃಷ್ಣಪ್ಪ ಸದಸ್ಯತ್ವ ಸಂಖ್ಯೆ: 11925 ಮತ್ತು ಶ್ರೀ ಎಸ್.ಟಿ. ಕೃಷ್ಣಪ್ಪ ಬಿನ್ ಲೇಟ್ ತಿಮ್ಮಯ್ಯ ಸದಸ್ಯತ್ವ ಸಂಖ್ಯೆ: 11924 ವಿಳಾಸ ನಂ.2002, 19ನೇ 'ಬಿ' ಮುಖ್ಯ ರಸ್ತೆ, 2ನೇ 'ಎ' ಮುಖ್ಯರಸ್ತೆ, ಜೆ.ಪಿ. ನಗರ, 2ನೇ ಹಂತ, ಬೆಂಗಳೂರು-560078, ಇವರು ಶ್ರೀ ಸುಬ್ರಮಣ್ಯೇಶ್ವರ ಕೋ-ಆಪರೇಟಿವ್ ಬ್ಯಾಂಕ್ ಲಿಮಿಟೆಡ್‌ನ ವಿ.ವಿ. ಪುರಂ ಶಾಖೆಯಿಂದ ಸಾಲವನ್ನು ಪಡೆದು ವಾಯಿದೆಯೊಳಗೆ ಸಾಲವನ್ನು ಮರುಪಾವತಿಸಲು ವಿಫಲರಾಗಿ ಸುಸ್ತಿದಾರರಾದುದರಿಂದ ಸಾಲ ವಸೂಲಾತಿಗಾಗಿ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 70 ರನ್ವಯ ಸಹಕಾರ ಸಂಘಗಳ ಉಪ ನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ, ಇವರ ನ್ಯಾಯಾಲಯದಲ್ಲಿ ದಾವಾ ಸಂಖ್ಯೆ: ಡಿಆರ್‌ಬಿ-1:ಡಿಐಎಸ್:975:99-2000 ರಂತೆ ದಾವೆ ಹೂಡಿ ಆದೇಶ ಪಡೆದಿದ್ದರೂ ಸಹ ಸಾಲ ವಸೂಲಾತಿ ಬಂದಿರುವುದಿಲ್ಲ.

ಸಹಕಾರ ಸಂಘಗಳ ಉಪ ನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ, ಇವರ ನ್ಯಾಯಾಲಯದಿಂದ ಪಡೆದ ಡಿಕ್ರಿ ಆದೇಶಾನುಸಾರ ಬ್ಯಾಂಕಿನ ಪ್ರಧಾನ ವ್ಯವಸ್ಥಾಪಕರು, ಕರ್ನಾಟಕ ಸಹಕಾರ ಸಂಘಗಳ ನಿಯಮಾವಳಿ 1960ರ ನಿಯಮ 34(1) ರನ್ವಯ ಈ ಕಛೇರಿಯಲ್ಲಿ ಅಮಲ್ಜಾರಿ ಸಂಖ್ಯೆ: ಎಆರ್‌ಬಿ-11(45) ಸಿ.ಇ.ಪಿ:430:2002-2003 ರಂತೆ ಕ್ರಮ ಕೈಗೊಳ್ಳಲು ದಾಖಲು ಮಾಡಲಾಗಿತ್ತು. ಸದರಿ ಅಮಲ್ಜಾರಿ ಅರ್ಜಿಯನ್ನು ನಿಯಮ 441 ರನ್ವಯ ನೇಮಕಗೊಂಡ ಮಾರಾಟಾಧಿಕಾರಿಯವರಿಗೆ ವಹಿಸಿಕೊಡಲಾಗಿತ್ತು. ಸದರೀ ಮಾರಾಟಾಧಿಕಾರಿಯವರು ಅಂತಿಮವಾಗಿ ಅಮಲ್ಜಾರಿ ಕ್ರಮ ಕೈಗೊಂಡು ಸುಸ್ತಿದಾರರು ಸಾಲಕ್ಕೆ ಆಧಾರ ಮಾಡಿದ್ದ ಈ ಕೆಳಗೆ ಕಾಣಿಸಿದ ಸ್ಥಿರಾಸ್ತಿಯನ್ನು ದಿನಾಂಕ: 27.01.2005 ರಂದು ಬಹಿರಂಗ ಹರಾಜಿಗೆ ತಂದಿದ್ದು, ಶ್ರೀ ಶಶಿಧರ್ ಎಂಬುವವರು ರೂ.16,10,000-00 ಗಳಿಗೆ ಬಿಡ್ ಮಾಡಿ ಹರಾಜಿನ ಷರತ್ತಿನ ಅನುಸಾರ ಶೇಕಡ 15 ರಷ್ಟು ಹಣವನ್ನು ಪಾವತಿಸಿದ ಕಾರಣ ಪುನಃ ದಿನಾಂಕ: 03.02.2005 ರಂದು ಬಹಿರಂಗ ಮರು ಹರಾಜಿಗೆ ತರಲಾಗಿತ್ತು. ಸದರೀ ದಿನ ನಡೆಸಿದ ಬಹಿರಂಗ ಮರು ಹರಾಜಿನಲ್ಲಿ 7 ಜನ ಬಿಡ್ಡುದಾರರು ಭಾಗವಹಿಸಿದ್ದು ಈ ಪೈಕಿ ಶ್ರೀ ಜಿ. ರಾಜೇಂದ್ರ ಕುಮಾರ್ ಬಿನ್ ಜಿ. ರಾಜರಾಮ್, ನಂ.627. ಅವೆನ್ಯೂ ರಸ್ತೆ, (ಖಾದಿ ಮಂದಿರ) ಬೆಂಗಳೂರು-560002 ಇವರು ರೂ.14,95,000/- ಕ್ಕೆ ಬಿಡ್ಡು ಮಾಡಿದ್ದು ಅತೀ ಹೆಚ್ಚಿನ ಬಿಡ್‌ದಾರರಾಗಿರುತ್ತಾರೆ.

ಅಮಲ್ಜಾರಿ ಅರ್ಜಿಯನ್ವಯ ರೂ.8,73,993-00 + ಬಡ್ಡಿ + ಇತರೆ ಖರ್ಚು ಬ್ಯಾಂಕಿಗೆ ಬರಬೇಕಾಗಿರುತ್ತದೆ. ರೂ.14,95,000/- ಗಳ ಅತೀ ಹೆಚ್ಚಿನ ಬಿಡ್ಡುದಾರರಾದ ಶ್ರೀ ಜಿ. ರಾಜೇಂದ್ರ ಕುಮಾರ್ ರವರು ಬಿಡ್ಡಿನ ಮೊತ್ತದ 15 ಶೇಕಡಾ ರೂ.2,25,000-00ನ್ನು ದಿನಾಂಕ: 03.02.2005 ರಂದು ಬ್ಯಾಂಕಿಗೆ ಪಾವತಿ ಮಾಡಿರುತ್ತಾರೆ ಹಾಗೂ ದಿನಾಂಕ: 09.03.2005 ರಂದು ರೂ.12,70,000-00 ಗಳನ್ನು ಪಾವತಿ ಮಾಡಿರುತ್ತಾರೆ. ಹರಾಜಿನ ಪೂರ್ಣ ಹಣವನ್ನು ಆಸ್ತಿ ಖರೀದಿಸಿದ ಶ್ರೀ ಜಿ. ರಾಜೇಂದ್ರ ಕುಮಾರ್ ರವರು ನಿಗದಿತ ಅವಧಿಯೊಳಗೆ ವಾದಿ ಬ್ಯಾಂಕಿಗೆ ಪಾವತಿಸಿರುತ್ತಾರೆ. ಸಾಲಗಾರರಾದ ಶ್ರೀ ಎಸ್.ಕೆ. ನವೀನ್ ರವರು ಸಹಕಾರ ಸಂಘಗಳ ನಿಯಮಗಳ ಪ್ರಕಾರ 30 ದಿನಗಳೊಳಗೆ ವಾದಿ ಬ್ಯಾಂಕಿಗೆ ಸಾಲದ ಬಾಕಿ ಮರು ಪಾವತಿಸಿರುವುದಿಲ್ಲ, ದಿನಾಂಕ: 03.02.2005 ರಂದು ಬಹಿರಂಗ ಹರಾಜಿನ ಮೂಲಕ ಆಸ್ತಿಯನ್ನು ಮಾರಾಟ ಮಾಡಿರುವ ಬಗ್ಗೆ ಈ ಕಛೇರಿಗೆ ಯಾವುದೇ ಆಕ್ಷೇಪಣೆಯನ್ನು ಸಹ ಸಲ್ಲಿಸಿರುವುದಿಲ್ಲ.

ನಿಯಮ 441ರ ಪ್ರಕಾರ ನೇಮಕಗೊಂಡ ಬ್ಯಾಂಕಿನ ಮಾರಾಟಾಧಿಕಾರಿಯವರು ದಿನಾಂಕ: 03.02.2005 ರಂದು ಸಹಕಾರ ಸಂಘಗಳ ನಿಯಮಾವಳಿಗಳ ಪ್ರಕಾರ ಹರಾಜು ನಡವಳಿಕೆಗಳನ್ನು ನಡೆಸಿ ಮಾರಾಟವನ್ನು ಖಾಯಂಗೊಳಿಸಬಹುದೆಂದು ವರದಿಯನ್ನು ಸಲ್ಲಿಸಿರುತ್ತಾರೆ. ಸದರಿ ಸ್ಥಿರಾಸ್ತಿ ಬಹಿರಂಗ ಹರಾಜಿನಲ್ಲಿ ಒಟ್ಟು 7 ಜನ ಬಿಡ್ಡುದಾರರು ಭಾಗವಹಿಸಿದ್ದು, ಈ ಪೈಕಿ ಅತ್ಯಧಿಕ ಬಿಡ್ಡುದಾರರಾದ ಶ್ರೀ ಜಿ. ರಾಜೇಂದ್ರ ಕುಮಾರ್ ಬಿನ್ ಜಿ. ರಾಜರಾಮ್, ನಂ.627, ಅವೆನ್ಯೂ ರಸ್ತೆ, (ಖಾದಿ ಮಂದಿರ) ಬೆಂಗಳೂರು-560 002 ಇವರಿಗೆ ರೂ.14,95,000/-ಕ್ಕೆ ಮಾರಾಟ ಮಾಡಿರುವುದು ವರದಿಯಲ್ಲಿನ ದಾಖಲಾತಿಗಳಿಂದ ತಿಳಿದು ಬಂದಿರುತ್ತದೆ. ಆಸ್ತಿ ಖರೀದಿಸಿದ ಶ್ರೀ ಜಿ. ರಾಜೇಂದ್ರ ಕುಮಾರ್ ರವರು ಹರಾಜಿನ ಪೂರ್ಣ ಹಣವನ್ನು ನಿಗದಿತ ಅವಧಿಯೊಳಗೆ ವಾದಿ ಬ್ಯಾಂಕಿಗೆ ಪಾವತಿಸಿರುವುದು ದಾಖಲಾತಿಗಳಿಂದ ದೃಢಪಟ್ಟಿರುವುದರಿಂದ ದಿನಾಂಕ: 03.02.2005 ರಂದು ನಡೆದ ಸ್ಥಿರಾಸ್ತಿ ಹರಾಜನ್ನು ಖಾಯಂಗೊಳಿಸಬಹುದೆಂದು ಮಾರಾಟಾಧಿಕಾರಿಯವರು ಸಲ್ಲಿಸಿದ ವರದಿಯನ್ನು ಕೂಲಂಕುಷವಾಗಿ ಪರಿಶೀಲಿಸಿ ಹಾಗೂ ಕೈಗೊಂಡ ಕ್ರಮಗಳು ಕಾನೂನು ಬದ್ಧವಾಗಿದೆ ಎಂದು ಕಂಡು ಬಂದಿರುವುದರಿಂದ ಈ ಕೆಳಗಿನ ಸ್ಥಿರೀಕರಣ ಆದೇಶ ಹೊರಡಿಸಲಾಗಿದೆ.

**ಆದೇಶ ಸಿ.ಇ.ಪಿ. ಸಂಖ್ಯೆ: ಎಆರ್‌ಇ/ಯುಬಿಎಫ್/60/2004-05, ದಿನಾಂಕ: 11ನೇ ಮಾರ್ಚ್ 2005**

ಎಸ್.ಎಸ್. ಕಟಗೇರಿ, ಸಹಕಾರ ಸಂಘಗಳ ಸಹಾಯಕ ನಿಬಂಧಕರು (ನಿ 441), ಹಾಗೂ ವಸೂಲಾಧಿಕಾರಿಗಳು, ಕರ್ನಾಟಕ ರಾಜ್ಯ ಸಹಕಾರ ಪಟ್ಟಣ ಬ್ಯಾಂಕುಗಳ ಮಹಾಮಂಡಳ ನಿ., ಬೆಂಗಳೂರು ಆದ ನಾನು ಕರ್ನಾಟಕ ಸಹಕಾರ ಸಂಘಗಳ ನಿಯಾಮವಳಿ 1960ರ ನಿಯಮ 38(6)(ಎ) ರನ್ವಯ ನನಗೆ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಅಮಲ್ಜಾರಿ ಸಂಖ್ಯೆ: ಎಆರ್‌ಬಿ-II(45) ಸಿ.ಇ.ಪಿ:430:2002-2003 ರಲ್ಲಿ ಶ್ರೀ ಎಸ್.ಕೆ. ನವೀನ್ ಬಿನ್ ಶ್ರೀ ಎಸ್.ಟಿ. ಕೃಷ್ಣಪ್ಪ, ಸದಸ್ಯತ್ವ ಸಂಖ್ಯೆ: 11925 ಮತ್ತು ಶ್ರೀ ಎಸ್.ಟಿ. ಕೃಷ್ಣಪ್ಪ ಬಿನ್ ಲೇಟ್ ತಿಮ್ಮಯ್ಯ ಸದಸ್ಯತ್ವ ಸಂಖ್ಯೆ:11924 ವಿಳಾಸ ನಂ.2002, 19ನೇ 'ಬಿ' ಮುಖ್ಯ ರಸ್ತೆ, 2ನೇ 'ಎ' ಮುಖ್ಯರಸ್ತೆ, ಜೆ.ಪಿ.ನಗರ 2ನೇ ಹಂತ, ಬೆಂಗಳೂರು-560 078, ಇವರಿಗೆ ಸೇರಿದ ಸ್ಥಿರಾಸ್ತಿಯನ್ನು ದಿನಾಂಕ: 03.02.2005 ರಂದು ವಾದಿ ಬ್ಯಾಂಕಿನ ಮಾರಾಟಾಧಿಕಾರಿಗಳು ಮಾಡಿದ ಬಹಿರಂಗ ಮರು ಹರಾಜಿನಲ್ಲಿ ಶ್ರೀ ಜಿ. ರಾಜೇಂದ್ರ ಕುಮಾರ್ ಬಿನ್ ಜಿ. ರಾಜರಾಮ್, ನಂ.627, ಅವೆನ್ಯೂ ರಸ್ತೆ, (ಖಾದಿ ಮಂದಿರ) ಬೆಂಗಳೂರು-560 002, ಇವರು ಅತೀ ಹೆಚ್ಚಿನ ಬಿಡ್ಡುದಾರರಾಗಿ ರೂ.14,95,000-00 ಗಳಿಗೆ ಖರೀದಿಸಿದ ಈ ಕೆಳಗೆ ವಿವರಿಸಿದ ಸ್ಥಿರಾಸ್ತಿಯನ್ನು ಬಹಿರಂಗವಾಗಿ ಹರಾಜು ಮೂಲಕ ಮಾರಾಟ ಮಾಡಿರುವುದನ್ನು ಖಾಯಂಗೊಳಿಸಿ ಸ್ಥಿರೀಕರಿಸಿರುತ್ತೇನೆ.

**ಸ್ಥಿರಾಸ್ತಿಯ ವಿವರ**

ಶ್ರೀ ಎಸ್.ಟಿ. ಕೃಷ್ಣಪ್ಪ ಬಿನ್ ಲೇಟ್ ತಿಮ್ಮಯ್ಯ ರವರಿಗೆ ಸೇರಿದ ಸ್ಥಿರಾಸ್ತಿಯ ಸಂಖ್ಯೆ: 627, ಅವೆನ್ಯೂ ರಸ್ತೆ, ಬೆಂಗಳೂರು ಮಹಾನಗರ ಪಾಲಿಕೆ ವಾರ್ಡ್ ನಂ.26, ಬೆಂಗಳೂರು, ಚಿಕ್ಕು ಬಂದಿ ಪೂರ್ವ-ಪಶ್ಚಿಮ 41.5 ಅಡಿ ಉತ್ತರ-ದಕ್ಷಿಣ 9.25 ಅಡಿ ಅಳತೆಯ ಕಟ್ಟಡ ಉತ್ತರಕ್ಕೆ ಖಾಸಗಿ ಸ್ವತ್ತು, ದಕ್ಷಿಣಕ್ಕೆ ಖಾಸಗಿ ಸ್ವತ್ತು, ಪೂರ್ವಕ್ಕೆ ರಸ್ತೆ ಮತ್ತು ಪಶ್ಚಿಮಕ್ಕೆ ಖಾಸಗಿ ಸ್ವತ್ತು. ಈ ಜಾಗದಲ್ಲಿರುವ ಗ್ರೌಂಡ್ ಫ್ಲೋರ್ ಮತ್ತು ಮೊದಲನೆ ಮಹಡಿಯಲ್ಲಿರುವ ಬಿಲ್ಡಿಂಗ್.

ಮಾರಾಟವಾದ ಮೊಬಲಗು ರೂ.14,95,000-00

ಮಾರಾಟ ಮಾಡಿದ ದಿನಾಂಕ: 03.02.2005.

ಈ ಆದೇಶವನ್ನು ನನ್ನ ಸಹಿ ಮತ್ತು ಕಛೇರಿ ಮೊಹರಿನೊಂದಿಗೆ ದಿನಾಂಕ: 11.03.2005 ರಂದು ನೀಡಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು (ನಿ.441) ಹಾಗೂ ವಸೂಲಾಧಿಕಾರಿಗಳು,

ಪಿ.ಆರ್. 484 ಕರ್ನಾಟಕ ರಾಜ್ಯ ಸಹಕಾರ ಬ್ಯಾಂಕುಗಳ ಮಹಾಮಂಡಳ ನಿ., ಬೆಂಗಳೂರು.

**IN THE HIGH COURT OF KARNATAKA, AT BANGALORE**

**ELECTION PETITION NO.6 OF 2004**

BETWEEN:

Shivalingappa Patil Naribol S/o Channabasappa patil, 55 years
R/o H.O. Naribol, Taluk Jewargi, Dist. Gulbarga. ...........Petitioner.
(By :M/s Pramila Associates,
Ms. Geetha Menon, Advocate)

**VS**

Sri Dharam Singh S/o Narayan Singh, 66 years.
R/o N.V. Layout, S.B. Temple Road, Dist. Gulbarga. ..........Respondent.
(M/s Aaren Associates)
By Sri. D.N. Nanjunda Reddy
Sri H.N. Harish Advocates for Respondent)

Whereas the petitioner above, named has presented the Election Petition against the aforesaid respondent U/s. 81 of the representation of People Act, 1951, praying to:

(a) declare that the declaration of the result of respondent to the 15-Jewargi Assembly Constituency is null and void,

(b) declare that the respondent has committed the corrupt practices under Sections, 123(1)(A), 123(3-A), 123(4), 123(6) and 123(7) read with Section 100 (1) (b) of the R.P. Act, 1951;

(c) name respondent as having committed corrupt practices under Section 98 of the Representation of Peoples Act and such other persons who have committed the corrupt practice;

(d) award costs of the petition;

(e) grant such other relief or consequential reliefs as this Court deems fit in the facts and circumstances of the case.

The above Election Petition coming on before the Court, for further orders, on 25th February 2005, the Hon'ble Court recorded that the sole petitioner in the above Election Petition Sri Shivalingappa died on 21.1.2005 and further directed that this fact to be published as contemplated by Sub-Section (2) and (3) of Section 112 of the Representation of People Act 1951.

There fore, it is hereby notified under Sub Sections (2) and (3) of Section 112 of the said Act that any person who might himself have been a petitioner may, within fourteen days of this Gazettee publication, apply to be substituted as petitioner and shall be entitled to continue the proceedings upon such terms and conditions as to security etc., as the Hon'ble High Court may deems fit.

Given under my hand and the seal of this Court, this the 25th day of February 2005.

By Order of the Court,

P.R. 485

**R.B. BUDIHAL**

Registrar (Judicial).

**IN THE COURT OF COMMISSIONER FOR WORKMEN'S COMPENSATION BIDAR**

**No. LOB/WCA/Cr-11/2005**

**Applicants:**
Saibanna S/o Mallappa
Aged about 50 years,
Occ: Agl. R/o Sonkera,
Tq. Humnabad, Dist. Bidar & 20 others

**V/s**

**Respondents:**
1) M/s Vichi Traders, H-60, APMC Market, No.11, Vashinani, Mumbai, Dist. Thane(MS) 500703.
B.M., New India Assurance Co. Ltd., Nehale Kahai, 5th Floor, 15 Mathew Road, Mumbai-500004.

**PROCLAIMATION**

Sri Saibanna F/o Mallappa R/o Sonkera, Tq. Humnabad, Dist. Bidar, has filed application in this court claiming compensation stating that Late: Mallappa was working as cleaner under the Respondent No.I he met with an accident arising out of and during the course of employment as a result he died on 3.3.2004.

Wherefore, it is hereby notified for the information of these concerned that other dependents if any may file their claim application and objections within 30 days from the date of publication of this proclaimation, if no applications or objections are received within the specified date the court will proceeded further in the matter.

P.R.486 COMMISSIONER FOR WORKMEN'S COMPENSATION, BIDAR.

**ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯದಲ್ಲಿ, ಕೊಪ್ಪಳ**

**ಪ್ರಕರಣ ಸಂಖ್ಯೆ: ಕಾಅಕೊ:ಕಾನಪ:ಎಫ್-68:2005, ದಿನಾಂಕ: 7ನೇ ಮಾರ್ಚ್ 2005**

**ಅರ್ಜಿದಾರರು**
1) ಶ್ರೀಮತಿ ನೀಲಮ್ಮ ಗಂಡ ಚಂದಪ್ಪ,
ಮೆಳಸಕೇರಿ (ಉಪ್ಪಾರ)
R/o ಸೇಬಿನಕಟ್ಟಿ ತಾ: ಕುಷ್ಟಗಿ, ಜಿ: ಕೊಪ್ಪಳ.

**ವಿರುದ್ಧ**

**ಪ್ರತಿವಾದಿಗಳು**
ಶ್ರೀ ದುರ್ಗಪ್ಪ ಅಲಿಯಾಸ್ ದುರ್ಗೋಜಿ ತಂದೆ ರಂಗಪ್ಪ ಸುರಪೂರ.
C/o ಮೆ: ನೇತ್ರಾವತಿ ಗ್ರಾನೈಟ್, ಇಲಕಲ್ಲ.

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಮೃತ: ಶ್ರೀಮತಿ ಬಸಮ್ಮ ಎಂಬುವವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿರುವಾಗ ದಿನಾಂಕ: 28.12.2003 ರಂದು ಕೆಲಸದಿಂದುಂಟಾದ ಅಪಘಾತದಿಂದ ಮೃತ ಹೊಂದಿರುತ್ತಾರೆ ಎಂದು ವಿವರಿಸುತ್ತಾ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ 1923 ರಡಿ ಪರಿಹಾರ ಧನಕ್ಕಾಗಿ ಕೋರಿ ಅವಲಂಬಿತ ವಾರಸುದಾರರೆಂದು ಹೇಳಿಕೊಂಡ ಮೃತ ಬಸಮ್ಮ ರವರ ವಾರಸುದಾರರಾದ ಶ್ರೀಮತಿ ನೀಲಮ್ಮ ಎಂಬುವವರು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ ಕಾರಣ ಈ ಬಗ್ಗೆ ಆಕ್ಷೇಪಣೆ ಇದ್ದಲ್ಲಿ ಅಥವಾ ತಾವೇನಾದರು ಅಥವಾ ತಾವೂ ಸಹ ಮೃತ ಹೊಂದಿದವರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ಸೂಚನಾ ಫಲಕದಲ್ಲಿ

ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡ ಅಥವಾ ಸ್ಥಳೀಯ ದಿನಪತ್ರಿಕೆಯಲ್ಲಿ ಪ್ರಕಟಗೊಂಡ 30 ದಿನದೊಳಗಾಗಿ ಆಕ್ಷೇಪಣೆ ಅಥವಾ ಅರ್ಜಿ ಸಲ್ಲಿಸಬಹುದಾಗಿದೆ ಎಂದು ಮತ್ತು ಸದ್ರಿ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಅಥವಾ ಅರ್ಜಿಗಳಾಗಲೀ ಬಾರದಿದ್ದಲ್ಲಿ ಸದ್ರಿ ಅವಧಿ ಮುಗಿದ ನಂತರ ಮೇಲ್ಕಾಣಿಸಿದ ಅರ್ಜಿದಾರರ ಅರ್ಜಿಯನ್ನೇ ಮುಂದಿನ ವಿಚಾರಣೆಗಾಗಿ ತೆಗೆದುಕೊಳ್ಳಲಾಗುವುದೆಂದು ಈ ಪ್ರಕಟಣೆ ಮೂಲಕ ತಿಳಿಯಪಡಿಸಲಾಗಿದೆ.

ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಕೊಪ್ಪಳ ಜಿಲ್ಲೆ, ಕೊಪ್ಪಳ.

ಪಿ.ಆರ್. 487

**ಕಾರ್ಮಿಕ ನಷ್ಟ ಪರಿಹಾರಕ್ಕೆ ಆಯುಕ್ತರು ಮತ್ತು ಕಾರ್ಮಿಕ ಅಧಿಕಾರಿ, ಉಡುಪಿ ಜಿಲ್ಲೆ, ಉಡುಪಿ ಇವರ ನ್ಯಾಯಾಲಯ**

**ಸಂಖ್ಯೆ: ಡಬ್ಲ್ಯೂಸಿಎ:ಸಿಆರ್-2/ಎಫ್‌ಸಿ/2005/640 , ದಿನಾಂಕ: 18ನೇ ಫೆಬ್ರವರಿ 2005**

**ಅರ್ಜಿದಾರರು**

1) ದೀಪ್ತಿ, ದಿ. ಕೆ. ಶಂಕರ ನಾಯಕ್‌ರವರ ಮಗಳು,
2) ಮಾ. ಶಶಾಂಕ, ದಿ. ಕೆ. ಶಂಕರ ನಾಯಕ್‌ರವರ ಮಗ,
3) ಪದ್ಮಾವತಿ ನಾಯಕ್, ದಿ. ಕೆ.ಎಂ. ಶ್ರೀನಿವಾಸ ನಾಯಕ್‌ರವರ ಪತ್ನಿ,
ವಾಸ: ಶ್ರೀಹರಿ ನಿಲಯ, ಪರ್ಕಳ, ಉಡುಪಿ.

**ಪ್ರತಿವಾದಿಗಳು**

1) ಶ್ರೀ ಜಯರಾಮ ಸುವರ್ಣ ಬಿನ್ ಲೋಕಯ್ಯ,
ಜಯದೇವ ಮೋಟಾರ್ಸ್, ಇಂದ್ರಾಳಿ, ಉಡುಪಿ.
2) ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ. ಲಿ.,
ಉದಯವಾಣಿ ಬಿಲ್ಡಿಂಗ್, ಮಣಿಪಾಲ.

**ಅಧಿಸೂಚನೆ**

ಅರ್ಜಿದಾರಳಾದ ಕುಮಾರಿ ದೀಪ್ತಿ ಇವರು ತಮ್ಮ ತಂದೆಯಾದ ಶ್ರೀ ಕೆ. ಶಂಕರ ನಾಯಕ್ ಇವರು ಪ್ರತಿವಾದಿಗಳಾದ ಶ್ರೀ ಜಯರಾಮ ಸುವರ್ಣ ಇವರಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ ದಿನಾಂಕ: 4.11.2002 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿ ಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ, ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದಲ್ಲಿನಿಂದ 30 ದಿವಸಗಳ ಒಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೈಮ್ ಅರ್ಜಿ: ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸುವುದೆಂದು ತಿಳಿಸಲಾಗಿದೆ.

**ಹೆಚ್. ಗೋಪಾಲಗೌಡ**
ಕಾರ್ಮಿಕ ನಷ್ಟ ಪರಿಹಾರಕ್ಕೆ ಆಯುಕ್ತರು ಮತ್ತು ಕಾರ್ಮಿಕ ಅಧಿಕಾರಿ,
ಉಡುಪಿ ಜಿಲ್ಲೆ, ಉಡುಪಿ.

ಪಿ.ಆರ್. 488

**ಪೊಲೀಸ್ ಕಮೀಷನರ್ ರವರ ಕಛೇರಿ, ನಂ.1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ**

**ಅಧಿಸೂಚನೆ ಸಂಖ್ಯೆ: 5/ಸಂವಿ/ಸಿ.ಓ.ಪಿ/2005, ದಿನಾಂಕ: 7ನೇ ಮಾರ್ಚ್ 2005**

ಬೆಂಗಳೂರು ನಗರ, ಹಲಸೂರು ಸಂಚಾರ ಪೊಲೀಸ್ ಠಾಣೆ ವ್ಯಾಪ್ತಿಗೆ ಬರುವ ಪ್ರಿಮ್‌ರೋಸ್ ಕ್ರಾಸ್ ರಸ್ತೆಯಲ್ಲಿ ಅನಧಿಕೃತವಾಗಿ ವಾಹನಗಳನ್ನು ರಸ್ತೆಯ ಎರಡೂ ಬದಿಗಳಲ್ಲಿ ನಿಲ್ಲಿಸುವುದರಿಂದ ವಾಹನಗಳ ಸುಗಮ ಸಂಚಾರಕ್ಕೆ ತುಂಬಾ ಅಡ್ಡಿಯಾಗುತ್ತಿರುತ್ತೆ. ಪ್ರಿಮ್‌ರೋಸ್ ಕ್ರಾಸ್ ರಸ್ತೆಯು 25 ಅಡಿ ಅಗಲ ಮಾತ್ರ ಇದ್ದು ಹಾಗೂ ಈ ಕ್ರಾಸ್ ರಸ್ತೆಯು 250 ಅಡಿ ದೂರದ ಅಂತರದಲ್ಲಿ ಮನೆ ನಂ.11ರ ಬಳಿ ಅಂತ್ಯಗೊಂಡು ಮುಂದೆ ಸಾಗಲು ರಸ್ತೆ ಇರುವುದಿಲ್ಲ. ಈ ಅಂತರದ ರಸ್ತೆಯಲ್ಲಿ 12 ವಾಸದ ಮನೆಗಳು ಮಾತ್ರ ಇರುತ್ತವೆ. ಈ ಸಣ್ಣ ರಸ್ತೆಯಲ್ಲಿ ಇತರೆ ಸ್ಥಳದಿಂದ ಬರುವ ಲಾರಿ, ಟೆಂಪೋ, ಕಾರು ಹಾಗೂ ಇತರೆ ವಾಹನಗಳು ನಿಲುಗಡೆಗಾಗಿ ಉಪಯೋಗಿಸುತ್ತಿರುವುದರಿಂದ ಇಲ್ಲಿಯ ನಿವಾಸಿಗಳು ಅವರುಗಳ ವಾಹನಗಳನ್ನು ಮನೆಯಿಂದ ಹೊರಗೆ ತರಲು ಮತ್ತು ಒಳಕ್ಕೆ ತೆಗೆದುಕೊಂಡು ಹೋಗಲು ತೀವ್ರ ತೊಂದರೆ ಅನುಭವಿಸುತ್ತಿರುವುದು ಕಂಡುಬಂದಿರುತ್ತೆ. ನಿವಾಸಿಗಳು ಅನುಭವಿಸುತ್ತಿರುವ ಸಮಸ್ಯೆಯನ್ನು ತಪ್ಪಿಸಲು ಹಾಗೂ ಸುಗಮ ಸಂಚಾರಕ್ಕೆ ಅನುವು ಮಾಡಿಕೊಡಲು ಪ್ರಿಮ್ ರೋಸ್ ಕ್ರಾಸ್ ರಸ್ತೆಯಲ್ಲಿ ವಾಹನ ನಿಲುಗಡೆಯನ್ನು ನಿಷೇಧಿಸುವುದು ಅವಶ್ಯಕವಾಗಿರುತ್ತೆ.

ಆದ್ದರಿಂದ ಎಸ್. ಮರಿಸ್ವಾಮಿ, ಐ.ಪಿ.ಎಸ್, ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಭಾರತೀಯ ಮೋಟಾರ್ ವಾಹನ ಕಾಯ್ದೆ 1988ರ ಕಲಂ 115 ಹಾಗೂ ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಕಾಯ್ದೆ 1960ರ ಕಲಂ 3ರ ಪ್ರಕಾರ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡಂತೆ ವಾಹನ ನಿಲುಗಡೆಯನ್ನು ನಿರ್ಬಂಧಿಸಿ ಆದೇಶಿಸಿದ್ದೇನೆ.

"ಪ್ರಿಮ್‌ರೋಸ್ ಕ್ರಾಸ್ ರಸ್ತೆಯಲ್ಲಿ, ಪ್ರಿಮ್‌ರೋಸ್ ಕ್ರಾಸ್ ರಸ್ತೆ ಮತ್ತು ಮಗರತ್ ರಸ್ತೆ ಜಂಕ್ಷನ್‌ನಿಂದ ಪ್ರಿಮ್‌ರೋಸ್ ಕ್ರಾಸ್ ರಸ್ತೆಯ ಮನೆ ನಂ.11 ರವರೆಗೆ ರಸ್ತೆಯ ಎರಡೂ ಬದಿಗಳಲ್ಲಿ ಎಲ್ಲಾ ತರಹದ ವಾಹನ ನಿಲುಗಡೆಯನ್ನು ನಿಷೇಧಿಸಿದೆ."

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮೇಲ್ಕಂಡ ನಿರ್ಬಂಧವನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸಹ ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ: 10.03.2005 ರಿಂದ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿನ ಅಂದರೆ ದಿನಾಂಕ: 07.03.2005 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಎಸ್. ಮರಿಸ್ವಾಮಿ**
ಪೊಲೀಸ್ ಕಮೀಷನರ್, ಬೆಂಗಳೂರು ನಗರ.

ಪಿ.ಆರ್. 489

**ಪೊಲೀಸ್ ಕಮೀಷನರ್ ರವರ ಕಛೇರಿ, ನಂ.1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ**

**ಅಧಿಸೂಚನೆ ಸಂಖ್ಯೆ: 7/ಸಂವಿ/ಸಿ.ಓ.ಪಿ/2005, ದಿನಾಂಕ: 9ನೇ ಮಾರ್ಚ್ 2005**

ಬೆಂಗಳೂರು ಮಹಾ ನಗರ ಮಡಿವಾಳ ಸಂಚಾರ ವಲಯದ ವ್ಯಾಪ್ತಿಯಲ್ಲಿ ಬರುವ ಹೊಸೂರು ಮುಖ್ಯ ರಸ್ತೆ (ಮಡಿವಾಳ ಮುಖ್ಯ ರಸ್ತೆ), ಸರ್ಜಾಪುರ ರಸ್ತೆ ಹಾಗೂ ಮಡಿವಾಳ ಸಂತೆಬೀದಿ ರಸ್ತೆಗಳಲ್ಲಿ ಸಂಚಾರ ದಟ್ಟಣೆಯಾಗುತ್ತಿರುವ ಕಾರಣ ಮತ್ತು ಕೇಂದ್ರ ರೇಷ್ಮೆ ಮಂಡಳಿ ವೃತ್ತದ ಮೇಲು ಸೇತುವೆಯ ಮೇಲಿನ ಸಂಚಾರವು ಅತ್ಯಧಿಕವಾಗಿ ಮಡಿವಾಳ ಮುಖ್ಯ ರಸ್ತೆ, ಐಯ್ಯಪ್ಪ ದೇವಸ್ಥಾನ ವೃತ್ತ ಮತ್ತು ಸರ್ಜಾಪುರ ರಸ್ತೆ ಜಂಕ್ಷನ್‌ಗಳಲ್ಲಿ ಸುಗಮ ಸಂಚಾರಕ್ಕೆ ಅಡಚಣೆಯಾಗುತ್ತಿರುವ ಕಾರಣ ಈ ರಸ್ತೆಗಳಲ್ಲಿ ಏಕಮುಖ ಸಂಚಾರ ವ್ಯವಸ್ಥೆಯನ್ನು ಜಾರಿಗೊಳಿಸುವುದು ಸಾರ್ವಜನಿಕ ಸಂಚಾರದ ಹಿತದೃಷ್ಟಿಯಿಂದ ಅವಶ್ಯಕವಾಗಿ ಕಂಡುಬಂದಿರುತ್ತದೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಎಸ್. ಮರಿಸ್ವಾಮಿ, ಐ.ಪಿ.ಎಸ್, ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಈ ಕೆಳಕಂಡಂತೆ ಏಕಮುಖ ಸಂಚಾರ ವ್ಯವಸ್ಥೆಯ ಸಂಚಾರ ನಿರ್ಬಂಧಗಳನ್ನು ಆದೇಶಿಸಿರುತ್ತೇನೆ.

1. ಮಡಿವಾಳ ಮುಖ್ಯ ರಸ್ತೆ : ಮಡಿವಾಳ ಪೊಲೀಸ್ ಠಾಣೆ ವೃತ್ತದಿಂದ ಸರ್ಜಾಪುರ ರಸ್ತೆ. ಹೊಸೂರು ರಸ್ತೆ, ಜಂಕ್ಷನ್ ವರೆಗೆ ದ್ವಿಮುಖ ಸಂಚಾರ ವ್ಯವಸ್ಥೆ ಇದ್ದು, ಈ ವ್ಯವಸ್ಥೆಯಲ್ಲಿ ಮಡಿವಾಳ ಪೊಲೀಸ್ ಠಾಣೆ ವೃತ್ತದಿಂದ ಸರ್ಜಾಪುರ ರಸ್ತೆ-ಹೊಸೂರು ರಸ್ತೆ ಜಂಕ್ಷನ್ ಕಡೆಗಿನ ಸಂಚಾರವನ್ನು ಯಥಾಸ್ಥಿತಿಯಲ್ಲಿರಿಸಿಕೊಂಡು ವಿರುದ್ಧ ದಿಕ್ಕಿನ ಸಂಚಾರವನ್ನು ನಿಷೇಧಿಸಿದೆ. ನಿರ್ಬಂಧಿಸಲಾದ ಸಂಚಾರವನ್ನು ಸರ್ಜಾಪುರ ರಸ್ತೆ ಜಂಕ್ಷನ್‌ನಲ್ಲಿ ಎಡ ತಿರುವು ಪಡೆದು ಸರ್ಜಾಪುರ ರಸ್ತೆಯಲ್ಲಿ ಕೋರಮಂಗಲ ವಾಟರ್ ಟ್ಯಾಂಕ್ ವೃತ್ತದ ಮಾರ್ಗವಾಗಿ ಕೃಪಾನಿಧಿ ಕಾಲೇಜ್ ಜಂಕ್ಷನ್‌ನಲ್ಲಿ ಬಲ ತಿರುವು ಪಡೆದು ಮಡಿವಾಳ ಸಂತೆಬೀದಿ ರಸ್ತೆಯಲ್ಲಿ ಸಂಚರಿಸಿ ಮಡಿವಾಳ ಪೊಲೀಸ್ ಠಾಣೆ ಜಂಕ್ಷನ್ ನಲ್ಲಿ ಹೊಸೂರು ರಸ್ತೆಗೆ ಎಡತಿರುವು ಪಡೆದು ಸಂಚರಿಸಲು ಅನುವು ಮಾಡಿಕೊಡಲಾಗಿದೆ.
2. ಸರ್ಜಾಪುರ ರಸ್ತೆ : ಈ ರಸ್ತೆಯಲ್ಲಿ ದ್ವಿಮುಖ ಸಂಚಾರ ವ್ಯವಸ್ಥೆ ಇದ್ದು, ಈ ವ್ಯವಸ್ಥೆಯಲ್ಲಿ ಸರ್ಜಾಪುರ ರಸ್ತೆ-ಹೊಸೂರು ರಸ್ತೆ ಜಂಕ್ಷನ್‌ನಿಂದ ಕೃಪಾನಿಧಿ ಕಾಲೇಜ್ ಜಂಕ್ಷನ್ ಕಡೆಗಿನ ಸಂಚಾರವನ್ನು ಯಥಾಸ್ಥಿತಿಯಲ್ಲಿರಿಸಿಕೊಂಡು ವಿರುದ್ಧ ದಿಕ್ಕಿನ ಸಂಚಾರವನ್ನು ನಿಷೇಧಿಸಿದೆ. ನಿರ್ಬಂಧಿಸಲಾದ ಸಂಚಾರವು ಕೃಪಾನಿಧಿ ಕಾಲೇಜ್ ಜಂಕ್ಷನ್‌ನಲ್ಲಿ ಮಡಿವಾಳ ಸಂತೆ ಬೀದಿ ರಸ್ತೆಯಲ್ಲಿ ಸಂಚರಿಸಿ ಮಡಿವಾಳ ಪೊಲೀಸ್ ಠಾಣೆ ಜಂಕ್ಷನ್ ನಲ್ಲಿ ಬಲ ತಿರುವು ಪಡೆದು ಹೊಸೂರು ರಸ್ತೆ (ಮಡಿವಾಳ ಮುಖ್ಯ ರಸ್ತೆ) ಮುಖೇನ ಐಯ್ಯಪ್ಪ ದೇವಸ್ಥಾನ ಜಂಕ್ಷನ್ ಮಾರ್ಗವಾಗಿ ಸರ್ಜಾಪುರ ರಸ್ತೆ ಜಂಕ್ಷನ್ ಸೇರಿ ಸಂಚರಿಸಲು ಅವಕಾಶ ಕಲ್ಪಿಸಿದೆ. ಹಾಗೂ ಸರ್ಜಾಪುರ ರಸ್ತೆ ಕಡೆಯಿಂದ ಕೋರಮಂಗಲ ಬಿ.ಡಿ.ಎ. ಕಾಂಪ್ಲೆಕ್ಸ್ ಮತ್ತು 100ನೇ ಅಡಿ ರಸ್ತೆ ಕಡೆಗೆ ಸಂಚರಿಸುವ ಸಂಚಾರವು ಐಯ್ಯಪ್ಪ ದೇವಸ್ಥಾನ ಜಂಕ್ಷನ್‌ನಲ್ಲಿ ಬಲತಿರುವು ಪಡೆದು ಕೇಂದ್ರೀಯ ಸದನ ರಸ್ತೆಯಲ್ಲಿ ಕೋರಮಂಗಲ ವಾಟರ್ ಟ್ಯಾಂಕ್ ವೃತ್ತವನ್ನು ಸೇರಿ ಸಂಚರಿಸಲು ಅವಕಾಶ ಕಲ್ಪಿಸಿದೆ.
3. ಮಡಿವಾಳ ಸಂತೆ ಬೀದಿ ರಸ್ತೆ : ಈ ರಸ್ತೆಯಲ್ಲಿ ಹಾಲಿ ದ್ವಿಮುಖ ಸಂಚಾರ ವ್ಯವಸ್ಥೆಯಿದ್ದು, ಈ ವ್ಯವಸ್ಥೆಯಲ್ಲಿ ಸರ್ಜಾಪುರ ರಸ್ತೆ ಕೃಪಾನಿಧಿ ಕಾಲೇಜ್ ಜಂಕ್ಷನ್‌ನಿಂದ ಮಡಿವಾಳ ಪೊಲೀಸ್ ಠಾಣೆ ವೃತ್ತದವರೆಗೂ ಸಾಗುವ ಸಂಚಾರವನ್ನು ಯಥಾಸ್ಥಿತಿಯಲ್ಲಿ ಉಳಿಸಿಕೊಂಡು ವಿರುದ್ಧ ದಿಕ್ಕಿನ ಸಂಚಾರವನ್ನು ಅಂದರೆ ಹೊಸೂರು ರಸ್ತೆ-ಮಡಿವಾಳ ಪೊಲೀಸ್ ಠಾಣೆ ಜಂಕ್ಷನ್‌ನಿಂದ ಕೃಪಾನಿಧಿ ಕಾಲೇಜ್ ಜಂಕ್ಷನ್ ಕಡೆಗೆ ಸಾಗುವ ಸಂಚಾರವನ್ನು ನಿಷೇಧಿಸಲಾಗಿದೆ.

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಮೇಲ್ಕಂಡ ನಿರ್ಬಂಧನೆಯನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ: 12.03.2005 ರಿಂದ ಪ್ರಾಯೋಗಿಕವಾಗಿ 1 ತಿಂಗಳ ಕಾಲ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿನ ಅಂದರೆ ದಿನಾಂಕ: 09.03.2005 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಎಸ್. ಮರಿಸ್ವಾಮಿ**

ಪಿ.ಆರ್. 490 ಪೊಲೀಸ್ ಕಮೀಷನರ್, ಬೆಂಗಳೂರು ನಗರ.

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ**

**ಅಧಿಸೂಚನೆ ಸಂಖ್ಯೆ: ಎಲ್‌ಆರ್‌ಎಫ್ (ಕಲಂ 109) ಸಿಆರ್ 16:2004-05, ದಿನಾಂಕ: 5ನೇ ಮಾರ್ಚ್ 2005**

ಕೋಲಾರ ತಾಲ್ಲೂಕು, ಕಸಬಾ ಹೋಬಳಿ, ಬಸವನತ್ತ ಗ್ರಾಮದ ಸ.ನಂ.32/ಪಿ-1 ರಲ್ಲಿ 1-33 ಎಕರೆ, ಸ.ನಂ.33/ಪಿ-2 ರಲ್ಲಿ 0-09 ಗುಂಟೆ, ಸ.ನಂ.21/4 ರಲ್ಲಿ 0-30 ಗುಂಟೆ ಮತ್ತು ಸ.ನಂ.33/2 ರಲ್ಲಿ 1-01 ಎಕರೆ ಈ ರೀತಿಯಾಗಿ ಒಟ್ಟು 3-33 ಎಕರೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕ್ರಯಕ್ಕೆ ಪಡೆಯಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109(1) ರಡಿಯಲ್ಲಿ ಅನುಮತಿಯನ್ನು ನೀಡಲು ಕೋರಿ ಅಧ್ಯಕ್ಷರು, ವಿದ್ಯಾಜ್ಯೋತಿ ಎಜುಕೇಷನಲ್ ಟ್ರಸ್ಟ್, ಬಸವನತ್ತ, ಕೋಲಾರ ತಾಲ್ಲೂಕು ರವರು ನಮೂನೆ 15ಎ ರಲ್ಲಿ ಅರ್ಜಿಯನ್ನು ಅಗತ್ಯ ದಾಖಲೆಗಳೊಂದಿಗೆ ಸಲ್ಲಿಸಿರುವ ಸಂಬಂಧ ಕೋಲಾರ ತಾಲ್ಲೂಕು ತಹಶೀಲ್ದಾರ್ ರವರ ಪತ್ರದ ಸಂಖ್ಯೆ: ಎಲ್‌ಆರ್‌ಎಫ್:ಸಿಆರ್ 124/2004-05, ದಿನಾಂಕ: 4.3.2005 ರಂತೆ ಕಡತ ತಯಾರಿಸಿ ಪ್ರಸ್ತಾವನೆಯನ್ನು ಸಲ್ಲಿಸಿದ್ದು ಸದರಿ ಪ್ರಸ್ತಾವನೆಯನ್ನು ಸಹಾಯಕ ಕಮೀಷನರ್ ಕೋಲಾರ ಉಪ ವಿಭಾಗ ರವರು ಪರಿಶೀಲಿಸಿ ಪತ್ರ ಸಂಖ್ಯೆ: ಎಲ್‌ಆರ್‌ಎಫ್:ಸಿಆರ್ 26/2004-05 ದಿನಾಂಕ: 04.03.2005 ರಂತೆ ಪ್ರಸ್ತಾವನೆಯನ್ನು ಸಲ್ಲಿಸಿ ಅರ್ಜಿದಾರರಿಗೆ ಮೇಲ್ಕಂಡ ಜಮೀನುಗಳನ್ನು ಪ್ರಸ್ತಾಪಿತ ಉದ್ದೇಶಕ್ಕಾಗಿ ಕ್ರಯಕ್ಕೆ ಪಡೆಯಲು ಕರ್ನಾಟಕ ಭೂ ಸುಧಾರಣಾ ಕಾಯ್ದೆ 1961ರ ಕಲಂ 109(1) ರಂತೆ ಅನುಮತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿರುತ್ತೆ. ಬಸವನತ್ತ ಗ್ರಾಮದ ಸ.ನಂ.32/ಪಿ-1 ರಲ್ಲಿ 1-33 ಗುಂಟೆ, ಸ.ನಂ.33/ಪಿ-2 ರಲ್ಲಿ 0-09 ಗುಂಟೆ ಮತ್ತು ಸ.ನಂ.21/4 ರಲ್ಲಿ 0-30 ಗುಂಟೆ ಈ ಜಮೀನುಗಳ ಖಾತೆಯು ಶ್ರೀ ವಿ. ಲಕ್ಷ್ಮಯ್ಯ ಬಿನ್ ವೆಂಕಟಸ್ವಾಮಿ ಎಂಬುವರ ಹೆಸರಿನಲ್ಲಿದ್ದು ಈ ಜಮೀನುಗಳು ಇವರಿಗೆ ಕ್ರಯದ ಮೂಲಕ ಬಂದಿರುತ್ತೆ. ಸ.ನಂ.33/2 ರಲ್ಲಿ 1-01 ಎಕರೆ ಜಮೀನು ಶ್ರೀ ಶಂಕರ್‌ನಾಯ್ಕ್ ಬಿನ್ ಖುಬ್ಯಾನಾಯ್ಕ್ ಎಂಬುವವರ ಹೆಸರಿನಲ್ಲಿ ಇದ್ದು ಈ ಜಮೀನೂ ಸಹಾ ಇವರಿಗೆ ಕ್ರಯದ ಮೂಲಕ ಬಂದಿರುತ್ತೆ. ಮೇಲ್ಕಂಡ ಜಮೀನುಗಳನ್ನು ಅರ್ಜಿದಾರರಿಗೆ ಕ್ರಯಕ್ಕೆ ನೀಡಲು ಒಪ್ಪಿ ಮೇಲ್ಕಂಡ ಖಾತೆದಾರರು ದಿನಾಂಕ: 27.12.2004 ರಂದು ಕ್ರಯದ ಕರಾರು ಪತ್ರಗಳನ್ನು ಬರೆಸಿಕೊಟ್ಟಿರುತ್ತಾರೆ. ಮೇಲ್ಕಂಡ

ಜಮೀನುಗಳು ಕರ್ನಾಟಕ ಭೂ ಸುಧಾರಣೆ ಕಾಯ್ದೆ, ಕರ್ನಾಟಕ ಭೂ ಮಂಜೂರಾತಿ ಕಾಯ್ದೆ/ನಿಯಮಗಳು : ಇನಾಂ ರದ್ದಿಯಾತಿ ಕಾಯ್ದೆ ಮತ್ತು ಪಿ.ಟಿ.ಸಿ.ಎಲ್. ಕಾಯ್ದೆಗಳ ವ್ಯಾಪ್ತಿಗೆ ಒಳಪಟ್ಟಿರುವುದಿಲ್ಲ. ಮೇಲ್ಕಂಡ ಜಮೀನುಗಳ ಬಗ್ಗೆ ಯಾರೂ ಗೇಣಿ ಅರ್ಜಿಯನ್ನು ಸಲ್ಲಿಸಿರುವುದಿಲ್ಲ. ಹಾಗೂ ಮೇಲ್ಕಂಡ ಜಮೀನುಗಳು ಹಾಲಿ ಖಾತೆದಾರರಿಂದ ಯಾರಿಗೂ ಪರಭಾರೆಯಾಗಿರುವುದಿಲ್ಲ.

ಮೇಲ್ಕಂಡ ಟ್ರಸ್ಟ್ ಉಪ ನೋಂದಣಾಧಿಕಾರಿಗಳು ಕೋಲಾರ ರವರ ಕಛೇರಿಯಲ್ಲಿ ನಂ.38/96-97 ದಿನಾಂಕ: 23.12.96 ರಂತೆ ನೋಂದಾವಣೆಯಾಗಿರುತ್ತೆ. ಕ್ಷೇತ್ರ ಶಿಕ್ಷಣಾಧಿಕಾರಿಗಳು ಕೋಲಾರ ರವರ ಜ್ಞಾಪನ ಸಂಖ್ಯೆ: ಸಿಬ್ಬಂದಿ 3 ಅನುಮತಿ 215/98-99 ದಿನಾಂಕ: 10.8.98 ರಂತೆ ಅರ್ಜಿದಾರರಿಗೆ ಪ್ರಾಥಮಿಕ ಶಾಲೆಯನ್ನು ಪ್ರಾರಂಭಿಸಲು ನೋಂದಾಯಿಸಿರುತ್ತೆ. ನಿರ್ದೇಶಕರು (ಪ್ರಾಥಮಿಕ ಶಿಕ್ಷಣ) ಸಾರ್ವಜನಿಕ ಶಿಕ್ಷಣ ಇಲಾಖೆ ಹಾಗೂ ನೋಂದಣಿ ಅಧಿಕಾರಿಗಳು ಬೆಂಗಳೂರು ರವರ ಪ್ರಮಾಣ ಪತ್ರ ನಂ. ಸಿ7(6) ಖಾಹಿಪ್ರಾಶಾನೋಂದಣಿ 16/2003-04 ದಿನಾಂಕ: 11.06.2003 ರಂತೆ ಮೇಲ್ಕಂಡ ಶಿಕ್ಷಣ ಸಂಸ್ಥೆಯನ್ನು ನೋಂದಾಯಿಸಿ ತರಗತಿಗಳನ್ನು ನಡೆಸಲು ಅನುಮತಿ ನೀಡಿರುತ್ತೆ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (1) (II) ರಂತೆ ಶೈಕ್ಷಣಿಕ ಉದ್ದೇಶಕ್ಕಾಗಿ 4 ಯೂನಿಟ್‌ಗಳಿಗೆ ಮೀರದಂತೆ ಜಮೀನನ್ನು ಹೊಂದಲು ಅವಕಾಶವನ್ನು ಕಲ್ಪಿಸಿದ್ದು ಸರ್ಕಾರಿ ಅಧಿಸೂಚನೆ ಸಂಖ್ಯೆ: ಸಂವ್ಯಶಾಇ 47 ಶಾಸನ 2001 ಬೆಂಗಳೂರು ದಿನಾಂಕ: 23/04/2003 ರಂತೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (1)ಕ್ಕೆ ತಿದ್ದುಪಡಿಯನ್ನು ತಂದಿರುತ್ತೆ. (ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯ್ದೆ 2002) ಇದರಂತೆ ಶೈಕ್ಷಣಿಕ ಉದ್ದೇಶಕ್ಕಾಗಿ 2 ಯೂನಿಟ್‌ಗಳಿಗೆ ಮೀರದಂತೆ ಜಮೀನನ್ನು ಕ್ರಯಕ್ಕೆ ಪಡೆಯಲು/ದಾನವಾಗಿ ಪಡೆಯಲು ಅನುಮತಿ/ವಿನಾಯ್ತಿಯನ್ನು ನೀಡುವ ಅಧಿಕಾರವನ್ನು ಜಿಲ್ಲಾಧಿಕಾರಿಗಳಿಗೆ ನೀಡಿರುತ್ತೆ. ಇದರಂತೆ ಈ ಪ್ರಸ್ತಾವನೆಯು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (1) (II)ಕ್ಕೆ ಅನುಗುಣವಾಗಿರುವುದರಿಂದ ಕೋಲಾರ ತಾಲ್ಲೂಕು ಕಸಬಾ ಹೋಬಳಿ ಬಸವನತ್ತ ಗ್ರಾಮದ ಸ.ನಂ.32/ಪಿ-1 ರಲ್ಲಿ 1-33 ಎಕರೆ, ಸ.ನಂ.33/ಪಿ-2 ರಲ್ಲಿ 0-09 ಗುಂಟೆ, ಸ.ನಂ.21/4 ರಲ್ಲಿ 0-30 ಗುಂಟೆ ಮತ್ತು ಸ.ನಂ.33/2 ರಲ್ಲಿ 1-01 ಎಕರೆ ಈ ರೀತಿಯಾಗಿ ಒಟ್ಟು 3-33 ಎಕರೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕ್ರಯಕ್ಕೆ ಪಡೆಯಲು ಅಧ್ಯಕ್ಷರು, ವಿದ್ಯಾಜ್ಯೋತಿ ಎಜುಕೇಷನಲ್ ಟ್ರಸ್ಟ್, ಬಸವನತ್ತ ಕೋಲಾರ ತಾಲ್ಲೂಕು ರವರಿಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 79ಎ, 79ಬಿ ಮತ್ತು 80 ಗಳಿಗೆ ವಿನಾಯ್ತಿಯನ್ನು ನೀಡಿ ಮೇಲ್ಕಂಡ ಜಮೀನನ್ನು ಕ್ರಯಕ್ಕೆ ಪಡೆಯಲು ಕರ್ನಾಟಕ ಭೂಸುಧಾರಣೆ ಕಾಯ್ದೆ 1961ರ ಕಲಂ 109 (1) (II) ರಂತೆ ಅನುಮತಿಯನ್ನು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ನೀಡಲಾಗಿದೆ.

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಕ್ರಯಕ್ಕೆ ಪಡೆಯಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು 2 ವರ್ಷಗಳೊಳಗಾಗಿ ಉಪಯೋಗಿಸತಕ್ಕದ್ದು ಹಾಗೂ ಈ ಬಗ್ಗೆ ಲಿಖಿತ ಮೂಲಕ ಮಾಹಿತಿಯನ್ನು ಈ ಕಛೇರಿಗೆ ನೀಡತಕ್ಕದ್ದು.
2. ವಿನಾಯಿತಿ : ಅನುಮತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ 1956ರ ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 55 ಪೆಯಿಡ್ ಅಪ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರದ ಅಥವಾ ರಾಜ್ಯ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಾಗಿ ಅಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯ್ದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ (ಸಕ್ಷಮ ಪ್ರಾಧಿಕಾರದಿಂದ) ಅನುಮತಿ ಪಡೆಯಬೇಕು.
4. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ. : ಓ.ಡಿ.ಪಿ. ಗ್ರಾಮ ಪಂಚಾಯಿತಿಯ ವ್ಯಾಪ್ತಿಯ ಒಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
5. ಸ.ನಂ.21/4 ರ ಜಮೀನಿಗೆ ಪೂರ್ವದ ಕಡೆ ಮತ್ತು ಸ.ನಂ.33/2 ಮತ್ತು ಸ.ನಂ.33/ಪಿ-2ರ ಜಮೀನುಗಳಿಗೆ ಪಶ್ಚಿಮದ ಕಡೆ ರಸ್ತೆ ಇರುವುದರಿಂದ ನಿಯಮಾನುಸಾರ ಅಗತ್ಯವಿರುವ ರಸ್ತೆ ಮಾರ್ಜಿನ್ ಬಿಡತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯಾ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾವಿತ ಜಮೀನನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತೆ ಮಾಡಿಕೊಳ್ಳಲಾಗುವುದು.
7. ಈ ಅನುಮತಿಯು ಭೂ ಸುಧಾರಣಾ ಕಾಯ್ದೆ 1961ರ ಕಲಂ 109 (1) (II) ರನ್ವಯ ಮಾತ್ರವಾಗಿರುತ್ತದೆ. ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ಪಿ.ಆರ್. 491 ಜಿಲ್ಲಾಧಿಕಾರಿಗಳು, ಕೋಲಾರ ಜಿಲ್ಲೆ, ಕೋಲಾರ

## IN THE COURT OF COMMISSIONER FOR WORKMEN'S COMPENSATION, BIDAR

**No. LOB/WCA/Cr-63/2004**

| Applicants: | V/s | Respondents: |
|---|---|---|
| 1) Kamala Bai W/o Late Vithal Kumbar Age 40 years, Occ House hold, R/o Kollar -B. Dist. Bidar. & 4 Others. | | 1) The Deputy Director of Sericulture Government Model Grainage Industrial Area, Bidar.<br>2) The Joint Director of Sericulture, Gulbarga.<br>3) The Commissioner of Sericulture Head Office, Bangalore. |

**PROCLAMATION**

Smt. Kamala Bai W/o Late Vithal Kumbar, R/o Kollar-B, Dist. Bidar, has filed application in this court claiming compensation stating that Late: Vithal Kumbar was working as Watchman under the Respondent No.I he met with an accident arising out of and during the course of employment as a result he died on 26.4.2004.

Wherefore, it is hereby notified for the information of these concerned that other dependents if any may file their claim application and objections within 30 days from the date of publication of this proclamation, if no applications or objections are received within the specified date the court will proceeded further in the matter.

P.R.42 COMMISSIONER FOR WORKMEN'S COMPENSATION, BIDAR.

**IN THE COURT OF COMMISSIONER FOR WORKMEN'S COMPENSATION, BIDAR**

**No. LOB/WCA/Cr-62/2004**

| **Applicants:** | **V/s** | **Respondents:** |
|---|---|---|
| 1) Kashinath S/o Malappa, Age 50 years, R/o Chalkapur Tq. Dist. Bidar & 4 others. | | 1) Ramanna S/o Mallappa, age Major occ: Agriculture, R/o Chalkapura Tq & Dist. Bidar.<br>2) Vithal Rao S/o Narsing Rao Pollapatti, Age Major, occ: Agriculture, R/o Chandanhalli,Tq: Humnabad, Dist. Bidar. |

**PROCLAMATION**

Sri Kashinath F/o Shivaputra, R/o Chalkapur Tq & Dist. Bidar, have filed application in this court claiming compensation stating that Late: Shivputra was working as Driver under the Respondent No.I he met with an accident arising out of and during the course of employment as a result he died on 24.12.2002.

Wherefore, it is hereby notified for the information of these concerned that other dependents if any may file their claim application and objections within 30 days from the date of publication of this proclamation, if no applications or objections are received within the specified date the court will proceeded further in the matter.

P.R.43 COMMISSIONER FOR WORKMEN'S COMPENSATION, BIDAR.

**IN THE COURT OF COMMISSIONER FOR WORKMEN'S COMPENSATION, BIDAR**

**No. LOB/WCA/Cr-9/2005**

| **Applicants:** | **V/s** | **Respondents:** |
|---|---|---|
| 1) Prakash S/o Nivarti Rao Age 45 years Occ Agl. Labour R/o Village Chandikapur Tq. Basavakalyan & Others. | | 1) Hafiz Ali S/o Mahboob Ali, 56172/ Aghapura Hyderabad.<br>2) New India Assurance Co. Ltd., Bidar. |

**PROCLAMATION**

Sri Prakash F/o Narayan, R/o Village Chandikapur Tq Basavakalyan, have filed application in this court claiming compensation stating that Late: Narayan was working as cleaner under the Respondent No.I he met with an accident arising out of and during the course of employment as a result he died on 27.06.2003.

Wherefore, it is hereby notified for the information of these concerned that other dependents if any may file their claim application and objections within 30 days from the date of publication of this proclamation, if no applications or objections are received within the specified date the court will proceeded further in the matter.

P.R.250 COMMISSIONER FOR WORKMEN'S COMPENSATION, BIDAR.

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ**

**ಅಧಿಸೂಚನೆ ಸಂಖ್ಯೆ: ಆಕುಕ 605 ಹೆಚ್‌ಎಸ್‌ಹೆಚ್ 2003, ದಿನಾಂಕ: 22ನೇ ಫೆಬ್ರವರಿ 2005**

ಡಾ: ಸೀತಾರಾಮ ಶೆಟ್ಟಿ, ಪ್ರಸ್ತುತ ಜಿಲ್ಲಾ ಮಲೇರಿಯಾ ಅಧಿಕಾರಿಗಳು, ಉಡುಪಿ ಇವರು ಈ ಹಿಂದೆ ತಾಲ್ಲೂಕು ಅಭಿವೃದ್ಧಿ ಮಂಡಳಿಯಲ್ಲಿ ಫಿಸಿಷಿಯನ್ ದರ್ಜೆ-3 ಹುದ್ದೆಗೆ ದಿನಾಂಕ: 1.7.81 ರಂದು ನೇಮಕಗೊಂಡು ಸದರಿ ದಿನಾಂಕದಿಂದ ಅನ್ವಯವಾಗುವಂತೆ ಸರ್ಕಾರಿ ಸೇವೆಯಲ್ಲಿ ವಿಲೀನಗೊಂಡಿರುತ್ತಾರೆ. ಆರೋಗ್ಯಾಧಿಕಾರಿ ಹಾಗೂ ಸಹಾಯಕ ಶಸ್ತ್ರ ಚಿಕಿತ್ಸಕ ದರ್ಜೆ-2ರ ಹುದ್ದೆಗೆ ಪದೋನ್ನತಿ ನೀಡುವ ಸಂದರ್ಭದಲ್ಲಿ ಡಾ: ಸೀತಾರಾಮ ಶೆಟ್ಟಿ ಇವರ ಹೆಸರು ದಿನಾಂಕ: 1.1.1983ರ ಜೇಷ್ಠತಾ ಪಟ್ಟಿಯಲ್ಲಿ ಬಿಟ್ಟು ಹೋಗಿದ್ದುದರಿಂದ ಪದೋನ್ನತಿ ನೀಡಿರುವುದಿಲ್ಲ. ಸದರಿಯವರು ಇಲಾಖಾ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರುವ ದಿನಾಂಕ: 10.11.1986 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಸಹಾಯಕ ಶಸ್ತ್ರ ಚಿಕಿತ್ಸಕರು ದರ್ಜೆ-2 ಹುದ್ದೆಗೆ ಪದೋನ್ನತಿ ನೀಡುವ ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು.

ಡಾ: ಸೀತಾರಾಮ ಶೆಟ್ಟಿ ಇವರಿಗೆ ಕರ್ನಾಟಕ ನಾಗರೀಕ ಸೇವಾ (ಬಡ್ತಿ, ವೇತನ ಮತ್ತು ಪಿಂಚಣಿಗಳ ಕ್ರಮಬದ್ಧತೆ) ನಿಯಮಗಳು 1978ರ ನಿಯಮ 2(3)ರ ಅಡಿಯಲ್ಲಿ ದಿನಾಂಕ: 10.11.1986 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಸಹಾಯಕ ಶಸ್ತ್ರ ಚಿಕಿತ್ಸಕರು ದರ್ಜೆ-2ರ ಹುದ್ದೆಗೆ ಪದೋನ್ನತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.492 **ಸಿ.ಎಸ್. ಜಗದೀಶಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಉತ್ತರ ಕನ್ನಡ ಜಿಲ್ಲೆ, ಕಾರವಾರ ರವರ ನ್ಯಾಯಾಲಯ**

**ನಂ: ಅಬಕಾರಿ/ಸಿಆರ್ಎಂ/ಡಿಟಿಸಿಆರ್/23/2004-05, ದಿನಾಂಕ: 5ನೇ ಮಾರ್ಚ್ 2005**

**ಉಪಸ್ಥಿತರು:** ಶ್ರೀ ಎ.ಎಸ್. ವಿಶ್ವರೂಪ, ಕೆ.ಇ.ಎಸ್.

ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಉತ್ತರ ಕನ್ನಡ ಜಿಲ್ಲೆ, ಕಾರವಾರ.

**ಫಿರ್ಯಾದಿ:** ಎಂ.ಪಿ. ಗೋಸಾವಿ, ಅಬಕಾರಿ ಉಪ ನಿರೀಕ್ಷಕರು-4, ಗುಪ್ತ ವಾರ್ತಾ ವಿಭಾಗ, ಕಾರವಾರ.

**ವಿರುದ್ಧ**

**ಆರೋಪಿ:** 1. ಅನೀಲ ಶಿವರಾಮ ಸೈಲ್

2. ಅಖ್ತರ್ ಆಲಿ ಉಸ್ಮದ್ ಮಾಂಡ್ಲಿಕ್, ಸಾ: ಇಬ್ಬರೂ ಹೊಸಾಳಿ, ಅಂಗಡಿ, ಕಾರವಾರ.

**ತೀರ್ಪು**

1. ಈ ಪ್ರಕರಣದ ಫಿರ್ಯಾದುದಾರರು ದಿನಾಂಕ: 26.04.2004 ರಂದು ಬೆಳಿಗ್ಗೆ 8.00 ಗಂಟೆಯ ಸಮಯದಲ್ಲಿ ಅಬಕಾರಿ ಉಪ ಅಧೀಕ್ಷಕರು, ಗುಪ್ತ ವಾರ್ತಾ ವಿಭಾಗ, ಕಾರವಾರ ಇವರ ನೇತೃತ್ವದಲ್ಲಿ, ತಮ್ಮ ಸಿಬ್ಬಂದಿಗಳೊಂದಿಗೆ ಕಾರವಾರ ಶಹರದ ಕೋಡಿಬೀರ್ ದೇವಸ್ಥಾನದ ಹತ್ತಿರದ ರಸ್ತೆಯ ಮೇಲೆ ಚುನಾವಣೆ ನಿಮಿತ್ತ ಅಕ್ರಮವಾಗಿ ಬಜಾಜ್ ಸ್ಕೂಟರ್ ದ್ವಿಚಕ್ರ ವಾಹನದಲ್ಲಿ ಗೋವಾ ರಾಜ್ಯದಲ್ಲಿ ತಯಾರಾದ ಮದ್ಯ ಮತ್ತು ಕ್ಯಾಶೂ ಫೆನ್ನಿ ಇಟ್ಟುಕೊಂಡು ವ್ಯಾಪಾರದ ಸಲುವಾಗಿ ಸಾಗಾಟ ಮಾಡುತ್ತಿದ್ದುದನ್ನು ಪತ್ತೆ ಹಚ್ಚಿದ್ದು, ಇವುಗಳನ್ನು ಸಾಗಿಸಲು ಯಾವುದೇ ರೀತಿಯ ರಹದಾರಿ ಪತ್ರವನ್ನು ಹೊಂದದೇ ಇದ್ದುದರಿಂದ ಇದು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 11 ಮತ್ತು 14(2) ರಂತೆ ಅಪರಾಧವಾಗಿರುವುದಾಗಿ ಹಾಗೂ ಕಲಂ 34 ಮತ್ತು 38(ಎ) ರಂತೆ ಶಿಕ್ಷಾರ್ಹವಾಗಿರುವುದಾಗಿ, ಮುಂದಿನ ಜಪ್ತು ಕ್ರಮ ಜರುಗಿಸಿ, ಅಬಕಾರಿ ಉಪ ನಿರೀಕ್ಷಕರು-4, ಗುಪ್ತ ವಾರ್ತಾ ವಿಭಾಗ, ಕಾರವಾರ ಇವರ ಗುನ್ನೆ ಸಂಖ್ಯೆ: ಇಎಕ್ಸ್/ಇಐಬಿ/ಎಸ್ಐಇ-4/ಎಫ್ಐಆರ್ ನಂ.25/2003-04, ದಿನಾಂಕ: 26.04.2004 ರಂತೆ ಗುನ್ನೆಯನ್ನು ದಾಖಲಿಸಿ, ಗುನ್ನೆಗೆ ಸಂಬಂಧಿಸಿದ ಪ್ರ.ಮಾ. ವರದಿ, ಪಂಚನಾಮೆಯ ನಕಲು ಹಾಗೂ ಸ್ವತ್ತಿನ ಪಟ್ಟಿಯನ್ನು ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ಜಪ್ತಿಯಾದ ಸ್ವತ್ತುಗಳ ವಿವರ ಈ ಕೆಳಗಿನಂತಿದೆ.

1. 180 ಮಿ.ಲೀ.ನ ಡಾಕ್ಟರ್ಸ್ ಇಂಟರ್ ಬಾಯ್ಸ್ ಬ್ರ್ಯಾಂಡಿ ಬಾಟ್ಲಿಗಳು - 86
2. 375 ಮಿ.ಲೀ.ನ ಗೋವಾ ಡಿಲಕ್ಸ್ ಕ್ಯಾಶೂ ಫೆನ್ನಿ ಬಾಟ್ಲಿಗಳು - 12
3. ಒಂದು ಬಜಾಜ್ ಕಂಪನಿಯ ಬಜಾಜ್ ಚೇತಕ್ ಸ್ಕೂಟರ್ ಸಂಖ್ಯೆ: ಕೆಎ-30/ಇ-6638

2. ಈ ಪ್ರಕರಣದ ತನಿಖಾಧಿಕಾರಿಗಳಾದ ಅಬಕಾರಿ ಉಪ ನಿರೀಕ್ಷಕರು-4, ಗುಪ್ತ ವಾರ್ತಾ ವಿಭಾಗ, ಕಾರವಾರ ಇವರ ಪತ್ರ ಸಂಖ್ಯೆ: ಅಬಕಾರಿ/ಎಸ್ಐಇ-4/ಗು.ನಂ.25/2003-04, ದಿನಾಂಕ: 23.08.2004 ರಂತೆ ಈ ಪ್ರಕರಣದಲ್ಲಿ ತೆಗೆಯಲಾದ ಮಾದರಿ ಸೀಸೆಗಳ ಬಗೆಗಿನ ರಾಸಾಯನಿಕ ವರದಿಯ ನಕಲನ್ನು ಲಗತ್ತಿಸಿ, ಜಪ್ತಿಯಾದ ಮದ್ಯ ಹಾಗೂ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಲು ವಿನಂತಿಸಿರುತ್ತಾರೆ. ಲಗ್ತ ಇರುವ ರಾಸಾಯನಿಕಾ ವಿಶ್ಲೇಷಣಾ ವರದಿ ಸಂಖ್ಯೆ: ಸಿಸಿಎಲ್/2780/2004, ದಿನಾಂಕ: 09.07.2004 ರಲ್ಲಿ ಮಾದರಿ ಸೀಸೆಗಳಲ್ಲಿ ಈಥೈಲ್ ಆಲ್ಕೋಹಾಲ್ ಪತ್ತೆಯಾಗಿದ್ದು, ಅದರಲ್ಲಿನ ಮದ್ಯಸಾರದ ಅಂಶವು ಕ್ರಮವಾಗಿ $36.3^0$ ಯು.ಪಿ. ಮತ್ತು $55.7^0$ ಯು.ಪಿ. ಯಷ್ಟು ಇರುವುದಾಗಿ ಹಾಗೂ ಸದರಿ ಮದ್ಯವು ನಕಲಿ ಮದ್ಯವಾಗಿರುವುದಾಗಿ ತಜ್ಞರು ಅಭಿಪ್ರಾಯಪಟ್ಟಿರುತ್ತಾರೆ. ಈ ಹಿನ್ನೆಲೆಯಲ್ಲಿ ಈ ಪ್ರಕರಣದಲ್ಲಿ ಜಪ್ತಿಯಾದ ಮದ್ಯದ ವಸ್ತುಗಳನ್ನು ದಿನಾಂಕ: 08.12.2004 ರಂದು ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಆದೇಶಿಸಲಾಗಿರುತ್ತದೆ.

3. ಈ ಪ್ರಕರಣದಲ್ಲಿ ಜಪ್ತಿಯಾದ ವಾಹನದ ಮಾಲೀಕರು ಇಂದಿನವರೆಗೂ ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸಿ, ಅರ್ಜಿ ಸಲ್ಲಿಸಿರುವುದಿಲ್ಲ. ಅಲ್ಲದೇ ಜಪ್ತಿಯಾದ ವಾಹನದ ಮಾಲೀಕರ ಹೆಸರು ಮತ್ತು ವಿಳಾಸವನ್ನು ತಿಳಿಸುವಂತೆ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಹೊನ್ನಾವರ ಇವರಿಗೆ ದಿನಾಂಕ: 28.07.2004 ರಂದು ಪತ್ರ ಬರೆಯಲಾಗಿ ಅವರು ಈ ವಾಹನದ ಬಿ ವಹಿಯ ಪ್ರತಿಗಳು ಕಾರವಾರದ ಪ್ರಾದೇಶಿಕ ಸಾರಿಗೆ ಅಧಿಕಾರಿಗಳ ಕಛೇರಿಯಿಂದ ಇನ್ನೂ ತರಿಸುವುದು ಬಾಕಿ ಇರುವುದರಿಂದ ಸದರಿ ವಾಹನದ ಮಾಲೀಕರ ದಾಖಲೆಯನ್ನು ಕಾರವಾರದ ಕಛೇರಿಯಿಂದ ಪಡೆಯುವಂತೆ ಸೂಚಿಸಿದನ್ವಯ ದಿನಾಂಕ: 24.08.2004 ರಂದು ಸದರಿ ವಾಹನದ ಬಿ ವಹಿಯ ಉದೃತ ಭಾಗವನ್ನು ಕಳುಹಿಸುವಂತೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಕಾರವಾರ ಇವರಿಗೆ ಪತ್ರ ಬರೆಯಲಾಗಿ ಇಂದಿನವರೆಗೂ ಸದರಿ ಮಾಹಿತಿಯನ್ನು ಕಳುಹಿಸಿರುವುದಿಲ್ಲ. ಅನಂತರ ದಿನಾಂಕ: 28.09.2004 ರಂದು ಇನ್ನೊಂದು ಪತ್ರ ಬರೆದರೂ ಸಹಾ ಯಾವುದೇ ರೀತಿಯ ಪ್ರಯೋಜನವಾಗಿರುವುದಿಲ್ಲ.

4. ಈ ಪ್ರಕರಣದಲ್ಲಿ ಫಿರ್ಯಾದುದಾರರು ಮತ್ತು ತನಿಖಾಧಿಕಾರಿಗಳು ಸಲ್ಲಿಸಿರುವ ದಾಖಲೆಗಳು ಅಭಿಯೋಜನೆಗೆ ಪೂರಕವಾಗಿದ್ದು, ಸದರಿ ದಾಖಲೆಗಳು ಹಾಗೂ ಪ್ರಕರಣದ ಸಂಪೂರ್ಣ ವಿದ್ಯಮಾನವನ್ನು ಗಮನಿಸಿದಾಗ ಈ ಪ್ರಕರಣದಲ್ಲಿ ಜಪ್ತಿಯಾದ ವಾಹನದಲ್ಲಿ ಅಕ್ರಮವಾಗಿ ಮದ್ಯವನ್ನು ಸಾಗಿಸಿರುವುದು ಮೇಲ್ನೋಟಕ್ಕೆ ಸ್ಪಷ್ಟವಾಗಿ ಸಾಬೀತಾಗುತ್ತದೆ. ಈ ವಿಷಯವು ತನಗೆ ಮನವರಿಕೆಯಾಗಿರುವುದರಿಂದಲೇ ವಾಹನದ ಮಾಲೀಕನು ತನ್ನ ಹಕ್ಕನ್ನು ಸ್ಥಾಪಿಸಿ, ಈ ಪ್ರಾಧಿಕಾರದಲ್ಲಿ ಅರ್ಜಿ ಸಲ್ಲಿಸದಿರುವುದು ಕಂಡುಬರುತ್ತದೆ.

5. ಅಲ್ಲದೆ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನದ ಮಾಲೀಕರಿಗೆ ಅಥವಾ ಏಜೆಂಟರ ಗಮನಕ್ಕೆ ಬಾರದೇ ಮತ್ತು ಅವರುಗಳು ಶಾಮೀಲಾಗದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದಂತೆ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿರುವುದಿಲ್ಲವಾದುದರಿಂದ ಸದರಿ ವಾಹನವನ್ನು ಇನ್ನೂ ಹಾಗೆಯೇ ಇಡುವುದರಿಂದ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡು ಬಂದಿರುವುದರಿಂದ ಈ ಕೆಳಗಿನಂತೆ

**ಆದೇಶ**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43ಬಿ ಪ್ರಕಾರ ಅನುಸರಿಬೇಕಾದ ಕ್ರಮಗಳನ್ನೆಲ್ಲಾ ಅನುಸರಿಸಿದ ನಂತರ ಕಲಂ 43ಎ(1) ರನ್ವಯ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಅಬಕಾರಿ ಉಪ ನಿರೀಕ್ಷಕರು-4, ಗುಪ್ತ ವಾರ್ತಾ ವಿಭಾಗ, ಕಾರವಾರ ಇವರ ಗುನ್ನೆ ಸಂಖ್ಯೆ: 25/2003-04 ದಿನಾಂಕ: 26.04.2004 ರಲ್ಲಿ ಜಪ್ತಿಯಾದಂತಹ ಬಜಾಜ್ ಚೇತಕ್ ಸ್ಕೂಟರ್ ಸಂಖ್ಯೆ: ಕೆ-30/ಇ-6638 ನೇದನ್ನು ಕಲಂ 43 ಎ(2) ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಆದೇಶಿಸಿದ್ದೇನೆ.

ವಾಹನದ ಹರಾಜಿನ ಬಗ್ಗೆ ಪ್ರತ್ಯೇಕ ಆದೇಶವನ್ನು ನೀಡಲಾಗುವುದು.

(ಈ ಆದೇಶವನ್ನು ಇಂದು ಅಂದರೆ 2005ನೇ ಇಸವಿಯ ಮಾರ್ಚ್ ತಿಂಗಳ 5ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತ ಲೇಖನ ನೀಡಿ ನಂತರ ಗಣಕೀಕೃತಗೊಳಿಸಿ, ಪ್ರಾಧಿಕಾರದ ಸೀಲ್ ಮೊಹರಿನೊಂದಿಗೆ ಹೊರಡಿಸಲಾಗಿದೆ.)

**ಎ.ಎಸ್. ವಿಶ್ವರೂಪ**

ಪಿ.ಆರ್. 499

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್,
ಉತ್ತರ ಕನ್ನಡ ಜಿಲ್ಲೆ, ಕಾರವಾರ.

**ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಉತ್ತರ ಕನ್ನಡ ಜಿಲ್ಲೆ, ಕಾರವಾರ ರವರ ನ್ಯಾಯಾಲಯ**

**ನಂ: ಅಬಕಾರಿ/ಸಿಆರ್‌ಎಂ/ಡಿಟಿಸಿಆರ್/92/2000-01, ದಿನಾಂಕ: 5ನೇ ಮಾರ್ಚ್ 2005**

**ಉಪಸ್ಥಿತರು:** ಶ್ರೀ ಎ.ಎಸ್. ವಿಶ್ವರೂಪ, ಕೆ.ಇ.ಎಸ್.
ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಉತ್ತರ ಕನ್ನಡ ಜಿಲ್ಲೆ, ಕಾರವಾರ.

**ಫಿರ್ಯಾದಿ:** ವೆಂಕಪ್ಪ ನಾಯ್ಕ, ಪೊಲೀಸ್ ಉಪ ನಿರೀಕ್ಷಕರು, ಚಿತ್ತಾಕುಲಾ ಪೊಲೀಸ್ ಠಾಣೆ.

**ವಿರುದ್ಧ**

**ಆರೋಪಿ:** ಶ್ರೀಪಾದ ಕಾಶೀನಾಥ ಕೊಳಂಬಕರ ಚಂದ್ರಾದೇವಿವಾಡಾ, ನಂದನಗದ್ದಾ, ಕಾರವಾರ.

**ತೀರ್ಪು**

1. ಈ ಪ್ರಕರಣದ ಫಿರ್ಯಾದುದಾರರು ದಿನಾಂಕ: 7.10.2000 ರಂದು ಸಿಬ್ಬಂದಿಗಳೊಂದಿಗೆ ಕೆಎ-30/ಜಿ-84ನೇ ಜೀಪಿನ ಮೇಲೆ ಶ್ರೀ ದುರ್ಗಾದೇವಿ ಪಲ್ಲಕ್ಕಿ ಉತ್ಸವದ ಸಂಬಂಧವಾಗಿ ಚಿತ್ತಾಕುಲಾ ಹಾಗೂ ಹೊರವಲಯಗಳಲ್ಲಿ ಗಸ್ತು ತಿರುಗುತ್ತಾ ರಾತ್ರಿ 19-30 ಗಂಟೆಯ ಸಮಯಕ್ಕೆ ರಾಜೇಖಾನ್‌ಬಾಗ್, ಸಂತೋಷ ಪ್ರಭಾಕರ ರಾಯ್ಕರ ರವರ ಮನೆಯ ಹತ್ತಿರ ಮಹಾಮಾಯೇ ದೇವಸ್ಥಾನದ ಕಡೆಗೆ ಹೋಗುತ್ತಿದ್ದಾಗ ಎದುರಿನಿಂದ ಆರೋಪಿಯು ನಂಬರಿಲ್ಲದ ಎಂ-80 ವಾಹನದ ಮೇಲೆ ಭಾರವಾದ ಕೈಚೀಲಗಳನ್ನು ಹೇರಿಕೊಂಡು ಬರುತ್ತಿದ್ದನೆಂದೂ, ತಮ್ಮ ಜೀಪನ್ನು ನೋಡಿ ತಾನು ಚಲಾಯಿಸಿಕೊಂಡು ಬರುತ್ತಿದ್ದ ವಾಹನವನ್ನು ಸಂತೋಷ ಪ್ರಭಾಕರ ರಾಯಕರ ರವರ ಮನೆಯ ಪಕ್ಕದ ಓಣಿಯ ಕಚ್ಚಾರಸ್ತೆಯ ಮೇಲೆ ಓಡಿಸಿಕೊಂಡು ಹೋದಾಗ ತಾನು ಸಿಬ್ಬಂದಿ ಹಾಗೂ ಚಾಲಕನ ಸಮೇತ ಬೆನ್ನಟ್ಟಿ ಓಡಿದಾಗ ಸದರ ಶ್ರೀಪಾದ ಈತನು ವಾಹನವನ್ನು ಸುಮಾರು 500 ಮೀಟರ್ ದೂರದಲ್ಲಿ ಗದ್ದೆ ಬಯಲಿನಲ್ಲಿ ನೀರು ಹರಿಯುವ ಜಾಗದಲ್ಲಿ ತಗ್ಗಿನಲ್ಲಿ ಮುಂದೆ ಹೋಗಲಾಗದೇ ನಿಲ್ಲಿಸಿ, ಕತ್ತಲೆಯಲ್ಲಿ ಓಡಿಹೋದನೆಂದೂ, ನಂತರ ಸಿಬ್ಬಂದಿಯವರ ಸಹಾಯದಿಂದ ವಾಹನವನ್ನು ರಾಜೇಖಾನ್ ಬಾಗ್ ಮಹಾಮಾಯಾ ದೇವಸ್ಥಾನಕ್ಕೆ ಹೋಗುವ ರಸ್ತೆಗೆ ತಂದಾಗ ಅದರಲ್ಲಿ ಅಬಕಾರಿ ವಸ್ತುಗಳು ಇರುವುದು ಖಾತ್ರಿಯಾಯಿತೆಂದೂ, ತಕ್ಷಣ ಪಿ.ಸಿ. 1235 ನೇ ಯವರನ್ನು ಕಳುಹಿಸಿ, ಇಬ್ಬರು ಪಂಚರನ್ನು ಬರಮಾಡಿಕೊಂಡು ಪಂಚರ ಸಮಕ್ಷಮ ಸದರಿ ಎಂ-80 ವಾಹನವನ್ನು ಹಾಗೂ ವಾಹನದ ಮೇಲೆ ಹೇರಿದ್ದ ಕೈಚೀಲಗಳನ್ನು ಬಿಚ್ಚಿಸಿ ಪರಿಶೀಲಿಸಲಾಗಿ ಒಂದು ಕೈಚೀಲದಲ್ಲಿ 180 ಮಿ.ಲೀ.ನ 24 ತನ್ನಿ ಎಂಬ ಬ್ರಾಂಡಿ ಬಾಟ್ಲಿಗಳಿದ್ದವೆಂದೂ, ವಾಹನದ ಮುಂಭಾಗದ ಮಧ್ಯಭಾಗದಲ್ಲಿ ಇದ್ದ ಪ್ಲಾಸ್ಟಿಕ್ ಕೈಚೀಲದಲ್ಲಿ 180 ಮಿ.ಲೀ.ನ 96 ಟೋನಿಯಾ ತ್ರಿಎಕ್ಸ್ ರಮ್ ಎಂಬ ಮದ್ಯದ ಬಾಟ್ಲಿಗಳು ಇದ್ದವೆಂದು ಹಾಗೂ ಮುಂಭಾಗದ ಎಡ ಭಾಗದ ಪ್ಲಾಸ್ಟಿಕ್ ಚೀಲದಲ್ಲಿ 180 ಮಿ.ಲೀ.ನ 24 ಡಾ: ಇಂಪೀರಿಯಲ್ ಬ್ರ್ಯಾಂಡಿ ಬಾಟ್ಲಿಗಳು ಇದ್ದವೆಂದೂ, ಮತ್ತು ಬಲಭಾಗದ ಪ್ಲಾಸ್ಟಿಕ್ ಕೈಚೀಲದಲ್ಲಿ 180 ಮಿ.ಲೀ.ನ 24 ಗೋಲ್ಡ್ ಕಾಯನ್ ಡಾ. ಬ್ರ್ಯಾಂಡಿ ಬಾಟ್ಲಿಗಳು ಇದ್ದವೆಂದೂ, ಇವುಗಳನ್ನು ಸಾಗಿಸುತ್ತಿದ್ದ ಬಜಾಜ್ ಎಂ-80 ವಾಹನವು ನೋಂದಣಿ ಸಂಖ್ಯೆಯನ್ನು ಹೊಂದಿರಲಿಲ್ಲವೆಂದೂ, ಆದರೆ ಅದರ ಇಂಜಿನ್ ನಂ.15ಇ056994 ಆಗಿದ್ದು, ಚಾಸಿಸ್ ನಂ.15ಸಿ059249 ಆಗಿತ್ತೆಂದೂ, ಸದರಿ ಸ್ಕೂಟರ್‌ನ್ನು ಹಾಗೂ ಮದ್ಯಸಾರದ ಸ್ವತ್ತುಗಳನ್ನು ಪಂಚರ ಸಮಕ್ಷಮ ಜಪ್ತು ಮಾಡಿ, ತಾಬಾ ತೆಗೆದುಕೊಳ್ಳಲಾಯಿತೆಂದೂ, ಜಪ್ತು ಸ್ವತ್ತಿನೊಂದಿಗೆ ಮುಂದಿನ ಕ್ರಮ ಕೈಗೊಂಡು ಸದರಿ ವಾಹನದಲ್ಲಿ ಅಕ್ರಮವಾಗಿ ಮದ್ಯಸಾರದ ಸ್ವತ್ತುಗಳನ್ನು ಸಾಗಾಟ ಮಾಡಿದ್ದು ಖಚಿತವಾಗಿದ್ದರಿಂದ ಇದು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 32 ರಂತೆ ಶಿಕ್ಷಾರ್ಹವಾಗಿದ್ದರಿಂದ ತನ್ನ ಫಿರ್ಯಾದನ್ನು ದಾಖಲಿಸಿದ ಪ್ರಕಾರ ಚಿತ್ತಾಕುಲಾ ಪೊಲೀಸ್ ಠಾಣೆಯ ಗುನ್ನೆ ಸಂಖ್ಯೆ: 111/2000 ದಿನಾಂಕ: 07.10.2000 ರಂತೆ ಪ್ರಕರಣವನ್ನು ದಾಖಲಿಸಿ ಪ್ರಕರಣಕ್ಕೆ ಸಂಬಂಧಿಸಿದ ದಾಖಲೆಗಳನ್ನು ಮುಂದಿನ ಕ್ರಮಕ್ಕಾಗಿ ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

2. ಪ್ರಕರಣದಲ್ಲಿ ತೆಗೆಯಲಾದ ಮಾದರಿ ಸೀಸೆಗಳ ಬಗೆಗಿನ ರಸಾಯನಿಕ ತಜ್ಞರ ವರದಿಯ ದೃಢೀಕೃತ ನಕಲನ್ನು ಸಲ್ಲಿಸುವುದು ತನಿಖಾಧಿಕಾರಿಗಳ ಕರ್ತವ್ಯವಾಗಿದ್ದರೂ ಸಹ ಈ ಪ್ರಕರಣದ ತನಿಖಾಧಿಕಾರಿಗಳಾದ ಪಿ.ಎಸ್.ಐ. ಚಿತ್ತಾಕುಲಾ ಪೊಲೀಸ್ ಠಾಣೆ ಇವರು ಇಂದಿನವರೆಗೂ ಸಂಬಂಧಪಟ್ಟ ರಾಸಾಯನಿಕ ವಿಶ್ಲೇಷಣಾ ವರದಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ಈ ಬಗ್ಗೆ ಈ ಪ್ರಾಧಿಕಾರದಿಂದ ದಿನಾಂಕ: 21.04.2004 ರಂದು ಪತ್ರ ಬರೆದರೂ ಸಹ ಯಾವುದೇ ರೀತಿಯ ಪ್ರಯೋಜನವಾಗಿಲ್ಲ. ಆದರೂ ಈ ಪ್ರಕರಣದಲ್ಲಿ ಫಿರ್ಯಾದುದಾರರು ಮತ್ತು ತನಿಖಾಧಿಕಾರಿಗಳು ಸಲ್ಲಿಸಿರುವ ದಾಖಲೆಗಳು ಅಭಿಯೋಜನೆಗೆ ಪೂರಕವಾಗಿದ್ದು, ಸದರಿ ದಾಖಲೆಗಳು ಹಾಗೂ ಪ್ರಕರಣದ ಸಂಪೂರ್ಣ ವಿದ್ಯಮಾನವನ್ನು ಗಮನಿಸಿದಾಗ ಈ ಪ್ರಕರಣದಲ್ಲಿ ಜಪ್ತಿಯಾದ ವಾಹನದಲ್ಲಿ ಅಕ್ರಮವಾಗಿ ಮದ್ಯವನ್ನು ಸಾಗಿಸಿರುವುದು ಮೇಲ್ನೋಟಕ್ಕೆ ಸ್ಪಷ್ಟವಾಗಿ ಸಾಬೀತಾಗುತ್ತದೆ.

3. ವಾಹನದ ಮಾಲೀಕರಿಗೆ ಇನ್ನೂ ಹೆಚ್ಚಿನ ಅವಕಾಶವನ್ನು ನೀಡುವ ಉದ್ದೇಶದಿಂದ ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದರ ವಿರುದ್ಧ ಯಾರದಾದರೂ ತಕರಾರು ಅಥವಾ ಹೇಳಿಕೆಯನ್ನು ಸಲ್ಲಿಸುವುದಿದ್ದಲ್ಲಿ ಪ್ರಕಟಣೆ ಹೊರಡಿಸಿದ 15 ದಿನಗಳೊಳಗಾಗಿ ಸಲ್ಲಿಸುವಂತೆ ದಿನಾಂಕ: 13.05.2004ರ "ವಿಜಯ ಕರ್ನಾಟಕ" ದಿನಪತ್ರಿಕೆಯಲ್ಲಿ ಸಾರ್ವಜನಿಕ ಪ್ರಕಟಣೆಯನ್ನು ಹೊರಡಿಸಲಾಗಿರುತ್ತದೆ. ಆದರೆ ಇಂದಿನವರೆಗೆ ಯಾರೂ ಸದರಿ ವಾಹನವು ತನ್ನದೆಂದು ತಿಳಿಸಿ, ಅಧಿಕೃತ ದಾಖಲೆಗಳೊಂದಿಗೆ ತನ್ನ ಹಕ್ಕನ್ನು ಸ್ಥಾಪಿಸಿ, ಅರ್ಜಿ ಸಲ್ಲಿಸಿರುವುದಿಲ್ಲ.

4. ಈ ಪ್ರಕರಣದಲ್ಲಿ ಫಿರ್ಯಾದುದಾರರು ಮತ್ತು ತನಿಖಾಧಿಕಾರಿಗಳು ಸಲ್ಲಿಸಿರುವ ದಾಖಲೆಗಳು ಅಭಿಯೋಜನೆಗೆ ಪೂರಕವಾಗಿದ್ದು, ಸದರಿ ದಾಖಲೆಗಳು ಹಾಗೂ ಪ್ರಕರಣದ ಸಂಪೂರ್ಣ ವಿದ್ಯಮಾನವನ್ನು ಗಮನಿಸಿದಾಗ ಈ ಪ್ರಕರಣದಲ್ಲಿ ಜಪ್ತಿಯಾದ ವಾಹನದಲ್ಲಿ ಅಕ್ರಮವಾಗಿ ಮದ್ಯವನ್ನು ಸಾಗಿಸಿರುವುದು ಮೇಲ್ನೋಟಕ್ಕೆ ಸ್ಪಷ್ಟವಾಗಿ ಸಾಬೀತಾಗುತ್ತದೆ.

5. ಅಲ್ಲದೆ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನದ ಮಾಲೀಕರಿಗೆ ಅಥವಾ ಏಜೆಂಟರ ಗಮನಕ್ಕೆ ಬಾರದೇ ಮತ್ತು ಅವರುಗಳು ಶಾಮೀಲಾಗದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದಂತೆ ಈ ಘಟನೆ ನಡೆದಿದೆ ಎಂಬುದನ್ನು

ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿರುವುದಿಲ್ಲವಾದುದರಿಂದ ಸದರಿ ವಾಹನವನ್ನು ಇನ್ನೂ ಹಾಗೆಯೇ ಇಡುವುದರಿಂದ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡು ಬಂದಿರುವುದರಿಂದ ಈ ಕೆಳಗಿನಂತೆ

**ಆದೇಶ**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43ಬಿ ಪ್ರಕಾರ ಅನುಸರಿಬೇಕಾದ ಕ್ರಮಗಳನ್ನೆಲ್ಲಾ ಅನುಸರಿಸಿದ ನಂತರ ಕಲಂ 43ಎ(1) ರನ್ವಯ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಪೊಲೀಸ್ ಉಪ ನಿರೀಕ್ಷಕರು, ಚಿತ್ತಾಕುಲಾ ಪೊಲೀಸ್ ಠಾಣೆ ಇವರ ಗುನ್ಹೆ ಸಂಖ್ಯೆ: 111/2000 ದಿನಾಂಕ: 07.10.2000 ರಲ್ಲಿ ಜಪ್ತಿಯಾದಂತಹ ನೋಂದಣಿ ಸಂಖ್ಯೆ ನಮೂದಿಸದ ಬಜಾಜ್ ಎಂ-80 ವಾಹನ ಇಂಜಿನ್ ಸಂಖ್ಯೆ: 15ಇ056994 ಮತ್ತು ಚಾಸಿಸ್ ನಂ.15ಸಿ059249 ನೇದನ್ನು ಹಾಗೂ 180 ಮಿ.ಲೀ.ನ 24 ತನ್ನಿ ಬ್ರಾಂಡಿಯ ಬಾಟ್ಲಿಗಳು, 180 ಮಿ.ಲೀ.ನ 24 ಟೋನಿಯಾ ತ್ರಿ ಎಕ್ಸ್ ರಮ್, 180 ಮಿ.ಲೀ.ನ 24 ಇಂಪೀರಿಯಲ್ ಬ್ರಾಂಡಿ ಬಾಟ್ಲಿಗಳು ಮತ್ತು 180 ಮಿ.ಲೀ.ನ 24 ಗೋಲ್ಡ್‌ಕಾಯ್ನ್ ಡಾ. ಬ್ರ್ಯಾಂಡಿ ಬಾಟ್ಲಿಗಳನ್ನು (ಮಾದರಿ ಸೀಸೆಗಳನ್ನು ಹೊರತು ಪಡಿಸಿ) ಕಲಂ 43ಎ(2) ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಆದೇಶಿಸಿದ್ದೇನೆ.

ಮುಟ್ಟುಗೋಲು ಹಾಕಿಕೊಂಡ ಮದ್ಯವು ಕರ್ನಾಟಕ ರಾಜ್ಯದಲ್ಲಿ ಮಾರಾಟಕ್ಕೆ ಅನುಮೋದನೆ ಪಡೆಯದಿರುವುದರಿಂದ ಇವನ್ನು ಅಬಕಾರಿ ಉಪ ಅಧೀಕ್ಷಕರು, ಗುಪ್ತ ವಾರ್ತಾ ವಿಭಾಗ, ಕಾರವಾರ ರವರ ಸಮಕ್ಷಮ ನಾಶಪಡಿಸಲು ಕಲಂ 43ಎ(3) ರಂತೆ ಅಬಕಾರಿ ನಿರೀಕ್ಷಕರು, ಕಾರವಾರ ವಲಯ ಇವರಿಗೆ ಆದೇಶಿಸಿದ್ದೇನೆ. ವಾಹನದ ಹರಾಜಿನ ಬಗ್ಗೆ ಪ್ರತ್ಯೇಕ ಆದೇಶವನ್ನು ನೀಡಲಾಗುವುದು.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

(ಈ ಆದೇಶವನ್ನು ಇಂದು ಅಂದರೆ 2005ನೇ ಇಸವಿಯ ಮಾರ್ಚ್ ತಿಂಗಳ 5ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತ ಲೇಖನ ನೀಡಿ ನಂತರ ಗಣಕೀಕೃತಗೊಳಿಸಿ, ಪ್ರಾಧಿಕಾರದ ಸೀಲ್ ಮೊಹರಿನೊಂದಿಗೆ ಹೊರಡಿಸಲಾಗಿದೆ.)

**ಎ.ಎಸ್. ವಿಶ್ವರೂಪ**

ಪಿ.ಆರ್. 500

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್,
ಉತ್ತರ ಕನ್ನಡ ಜಿಲ್ಲೆ, ಕಾರವಾರ.

**ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಉತ್ತರ ಕನ್ನಡ ಜಿಲ್ಲೆ, ಕಾರವಾರ ರವರ ನ್ಯಾಯಾಲಯ**

**ನಂ: ಅಬಕಾರಿ/ಸಿಆರ್‌ಎಂ/ಡಿಟಿಸಿಆರ್/86/2004-05, ದಿನಾಂಕ: 5ನೇ ಮಾರ್ಚ್ 2005**

**ಉಪಸ್ಥಿತರು:** ಶ್ರೀ ಎ.ಎಸ್. ವಿಶ್ವರೂಪ, ಕೆ.ಇ.ಎಸ್.
ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಉತ್ತರ ಕನ್ನಡ ಜಿಲ್ಲೆ, ಕಾರವಾರ.

**ಫಿರ್ಯಾದಿ:** ಟಿ.ಕೆ. ಹರಿಕಂತ್ರ, ಅಬಕಾರಿ ಉಪ ನಿರೀಕ್ಷಕರು-1, ಗುಪ್ತ ವಾರ್ತಾ ವಿಭಾಗ, ಕಾರವಾರ.

**ವಿರುದ್ಧ**

**ಆರೋಪಿ:** ರೇಮಿಡಿಸ್ ತಂದೆ ಮಿನಿನ ಡಿಸೋಜಾ, ಮುಕ್ಕಾಂ ಕೋಟಾವಾಡಾ, ಮುಡಗೇರಿ ಪೋಸ್ಟ್, ಅಂಗಡಿ, ಕಾರವಾರ.

**ತೀರ್ಪು**

1. ಈ ಪ್ರಕರಣದ ಫಿರ್ಯಾದುದಾರರು ದಿನಾಂಕ: 10.08.2004 ರಂದು ಮುಂಜಾನೆ 7.00 ಗಂಟೆಗೆ ಕಛೇರಿ ಆದೇಶದಂತೆ ತನ್ನ ಸಿಬ್ಬಂದಿಗಳೊಂದಿಗೆ ರಸ್ತೆ ಗಸ್ತು ಮತ್ತು ವಾಹನ ತಪಾಸಣೆ ನಡೆಸುವ ಕುರಿತು ಕಾರವಾರದಿಂದ ಅಂಕೋಲಾ ತಾಲ್ಲೂಕಿನ ಬಾಳೆಗುಳಿ ಗ್ರಾಮಕ್ಕೆ ಹೋಗುತ್ತಿರುವಾಗ ಕಾರವಾರ ತಾಲ್ಲೂಕಿನ ಸಂಕ್ರುಭಾಗ ರಾಷ್ಟ್ರೀಯ ಹೆದ್ದಾರಿ 17ರ ಘಟ್ಟದಲ್ಲಿ ಒಂದು ಬಜಾಜ್ ಕಂಪನಿಯ ಚೇತಕ್ ಸ್ಕೂಟರ್ ಸಂಖ್ಯೆ: ಕೆಎ-30/ಇ-8260 ರಲ್ಲಿ ಚಾಲಕನು ಒಂದು ಪಾಲಿಥಿನ್ ಚೀಲದ ಮೂಟೆಯನ್ನು ಹೇರಿಕೊಂಡು ಕಾರವಾರ ಕಡೆಯಿಂದ ಅಂಕೋಲಾ ಕಡೆಗೆ ಹೋಗುತ್ತಿರುವಾಗ ವಾಹನವನ್ನು ತಡೆದು ನಿಲ್ಲಿಸಿ, ಸ್ಕೂಟರಿನಲ್ಲಿದ್ದ ಚೀಲ ತಪಾಸಣೆ ಮಾಡಲಾಗಿ, ಗೋವಾ ರಾಜ್ಯದಲ್ಲಿ ತಯಾರಾದ ಬ್ರ್ಯಾಂಡಿಯ ಬಾಟ್ಲಿಗಳು ಇದ್ದದ್ದು ಕಂಡುಬಂತೆಂದೂ, ಇವುಗಳನ್ನು ಸಾಗಿಸಲು ಯಾವುದೇ ರೀತಿಯ ಲೈಸನ್ಸ್‌ನ್ನು ಹೊಂದದೇ ಇದ್ದುದರಿಂದ ಇದು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 11 ಮತ್ತು 14 ರಂತೆ ಅಪರಾಧವಾಗಿರುವುದಾಗಿ ಹಾಗೂ ಕಲಂ 34 ಮತ್ತು 38 (ಎ) ರಂತೆ ಶಿಕ್ಷಾರ್ಹವಾಗಿರುವುದಾಗಿ ಮುಂದಿನ ಜಪ್ತು ಕ್ರಮ ಜರುಗಿಸಿ, ಅಬಕಾರಿ ಉಪ ನಿರೀಕ್ಷಕರು-1, ಗುಪ್ತ ವಾರ್ತಾ ವಿಭಾಗ, ಕಾರವಾರ ಇವರ ಗುನ್ಹೆ ಸಂಖ್ಯೆ: ಇಎಕ್ಸ್‌ಇ/ಇಐಬಿ/ಎಸ್‌ಐಇ-1/ಎಫ್.ಐ.ಆರ್. ನಂ.8/2004-05 ದಿನಾಂಕ: 10.08.2004 ರಂತೆ ಗುನ್ಹೆಯನ್ನು ದಾಖಲಿಸಿ, ಗುನ್ಹೆಗೆ ಸಂಬಂಧಿಸಿದ ಪ್ರ.ಮಾ. ವರದಿ, ಪಂಚನಾಮೆಯ ನಕಲು ಹಾಗೂ ಸ್ವತ್ತಿನ ಪಟ್ಟಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ಜಪ್ತಿಯಾದ ಸ್ವತ್ತುಗಳ ವಿವರ ಈ ಕೆಳಗಿನಂತಿದೆ.

1. ಬಜಾಜ್ ಕಂಪನಿಯ ಸ್ಕೂಟರ್ ನಂ. ಕೆಎ-30/ಇ-8260,
2. 180 ಮಿ.ಲೀ.ನ ಡಾಕ್ಟರ್ ಇಂಟರ್ ಚಾಯ್ಸ್ ಬ್ರ್ಯಾಂಡಿ ಬಾಟ್ಲಿಗಳು-48

2. ಈ ಪ್ರಕರಣದ ತನಿಖಾಧಿಕಾರಿಗಳಾದ ಅಬಕಾರಿ ಉಪ ನಿರೀಕ್ಷಕರು-1, ಗುಪ್ತ ವಾರ್ತಾ ವಿಭಾಗ, ಕಾರವಾರ ಇವರ ಪತ್ರ ಸಂಖ್ಯೆ: ಇಎಕ್ಸ್‌ಇ/ಸಿಆರ್‌ಎಂ/01/2004-05 ರಂತೆ ಈ ಪ್ರಕರಣದಲ್ಲಿ ತೆಗೆಯಲಾದ ಮಾದರಿ ಸೀಸೆಗಳ ಬಗೆಗಿನ ರಾಸಾಯನಿಕ ವರದಿಯ ನಕಲನ್ನು ಲಗತ್ತಿಸಿ, ಜಪ್ತಿಯಾದ ಮದ್ಯ ಹಾಗೂ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಲು ವಿನಂತಿಸಿರುತ್ತಾರೆ. ಲಗ್ತ ಇರುವ ರಾಸಾಯನಿಕಾ ವಿಶ್ಲೇಷಣಾ ವರದಿ ಸಂಖ್ಯೆ: ಸಿಸಿಎಲ್/3412/2004, ದಿನಾಂಕ: 16.08.2004 ರಲ್ಲಿ ಮಾದರಿ ಸೀಸೆಗಳಲ್ಲಿ ಆಲ್ಕೋಹಾಲ್ ಪತ್ತೆಯಾಗಿದ್ದು, ಅದರಲ್ಲಿನ ಮದ್ಯಸಾರದ ಅಂಶವು $50.1^0$ ಯು.ಪಿ. ಯಷ್ಟು ಇರುವುದಾಗಿ ಹಾಗೂ ಇವು ನಕಲಿ ಮದ್ಯವಾಗಿರುವುದಾಗಿ ತಜ್ಞರು ಅಭಿಪ್ರಾಯಪಟ್ಟಿರುತ್ತಾರೆ. ಪ್ರಕರಣ ದಾಖಲಿಸಿ 30 ದಿನಗಳ ನಂತರವೂ ಸಹ ಜಪ್ತಿಯಾದ ಸ್ವತ್ತುಗಳು ತನ್ನದೆಂದು ಕೋರಿ ಯಾರೂ ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸಿ, ಅರ್ಜಿ ಸಲ್ಲಿಸಿರುವುದಿಲ್ಲ. ಈ ಹಿನ್ನೆಲೆಯಲ್ಲಿ ಈ ಪ್ರಕರಣದಲ್ಲಿ ಜಪ್ತಿಯಾದಂತಹ 180 ಮಿ.ಲೀ.ನ ಡಾ. ಇಂಟರ್ ಚಾಯ್ಸ್ ಬ್ರ್ಯಾಂಡಿಯ 48 ಬಾಟ್ಲಿಗಳನ್ನು (ಮಾದರಿ ಸೀಸೆಗಳನ್ನು ಹೊರತುಪಡಿಸಿ) ಆದೇಶ ಸಂಖ್ಯೆ: ಡಿಟಿಸಿಆರ್/86/2004-05, ದಿನಾಂಕ: 21/09/2004 ರಂತೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿ, ವಿಲೇವಾರಿಗೆ ಆದೇಶಿಸಲಾಗಿರುತ್ತದೆ.

3. ವಾಹನದ ಮಾಲೀಕರಿಗೆ ಇನ್ನೂ ಹೆಚ್ಚಿನ ಅವಕಾಶವನ್ನು ನೀಡುವ ಉದ್ದೇಶದಿಂದ ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದರ ವಿರುದ್ಧ ಯಾರದಾದರೂ ತಕರಾರು ಅಥವಾ ಹೇಳಿಕೆಯನ್ನು ಸಲ್ಲಿಸುವುದಿದ್ದಲ್ಲಿ ಪ್ರಕಟಣೆ ಹೊರಡಿಸಿದ ಸಾರ್ವಜನಿಕ 15 ದಿನಗಳೊಳಗಾಗಿ ಸಲ್ಲಿಸುವಂತೆ ದಿನಾಂಕ: 19.2.2005ರ "ಕರಾವಳಿ ಮುಂಜಾವು" ದಿನಪತ್ರಿಕೆಯಲ್ಲಿ ಪ್ರಕಟಣೆಯನ್ನು ಹೊರಡಿಸಲಾಗಿರುತ್ತದೆ. ಆದರೆ ಇಂದಿನವರೆಗೂ ಯಾರೂ ತನ್ನ ಹೇಳಿಕೆಯನ್ನು ಅಥವಾ ತಕರಾರನ್ನು ಸಲ್ಲಿಸಿರುವುದಿಲ್ಲ.

4. ಈ ಪ್ರಕರಣದಲ್ಲಿ ಫಿರ್ಯಾದುದಾರರು ಮತ್ತು ತನಿಖಾಧಿಕಾರಿಗಳು ಸಲ್ಲಿಸಿರುವ ದಾಖಲೆಗಳು ಅಭಿಯೋಜನೆಗೆ ಪೂರಕವಾಗಿದ್ದು, ಸದರಿ ದಾಖಲೆಗಳು ಹಾಗೂ ಪ್ರಕರಣದ ಸಂಪೂರ್ಣ ವಿದ್ಯಮಾನವನ್ನು ಗಮನಿಸಿದಾಗ ಈ ಪ್ರಕರಣದಲ್ಲಿ ಜಪ್ತಿಯಾದ ವಾಹನದಲ್ಲಿ ಅಕ್ರಮವಾಗಿ ಮದ್ಯವನ್ನು ಸಾಗಿಸಿರುವುದು ಮೇಲ್ನೋಟಕ್ಕೆ ಸ್ಪಷ್ಟವಾಗಿ ಸಾಬೀತಾಗುತ್ತದೆ. ಅಲ್ಲದೆ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನದ ಮಾಲೀಕರಿಗೆ ಅಥವಾ ಏಜೆಂಟರ ಗಮನಕ್ಕೆ ಬಾರದೇ ಮತ್ತು ಅವರುಗಳು ಶಾಮೀಲಾಗದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದಂತೆ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿರುವುದಿಲ್ಲವಾದುದರಿಂದ ಸದರಿ ವಾಹನವನ್ನು ಇನ್ನೂ ಹಾಗೆಯೇ ಇಡುವುದರಿಂದ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡು ಬಂದಿರುವುದರಿಂದ ಈ ಕೆಳಗಿನಂತೆ

**ಆದೇಶ**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43ಬಿ ಪ್ರಕಾರ ಅನುಸರಿಬೇಕಾದ ಕ್ರಮಗಳನ್ನೆಲ್ಲಾ ಅನುಸರಿಸಿದ ನಂತರ ಕಲಂ 43ಎ(1) ರನ್ವಯ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಅಬಕಾರಿ ಉಪ ನಿರೀಕ್ಷಕರು-1, ಗುಪ್ತ ವಾರ್ತಾ ವಿಭಾಗ, ಕಾರವಾರ ಇವರ ಗುನ್ನೆ ಸಂಖ್ಯೆ: ಇಎಕ್ಸ್/ಇಐಬಿ/ಎಸ್‌ಐಇ-1/ಎಫ್‌ಐಆರ್ ನಂ.08/2004-05 ದಿನಾಂಕ: 10.08.2004 ರಲ್ಲಿ ಜಪ್ತಿಯಾದಂತಹ ಬಜಾಜ್ ಕಂಪನಿಯ ಸ್ಕೂಟರ್ ಸಂಖ್ಯೆ: ಕೆಎ-30/ಇ-8260 ನೇದನ್ನು ಕಲಂ 43 ಎ(2) ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಆದೇಶಿಸಿದ್ದೇನೆ.

ಮುಟ್ಟುಗೋಲು ಹಾಕಿಕೊಂಡ ವಾಹನವನ್ನು ಅಬಕಾರಿ ಉಪ ಅಧೀಕ್ಷಕರು, ಗುಪ್ತ ವಾರ್ತಾ ವಿಭಾಗ, ಕಾರವಾರ ಇವರು ಸದರಿ ವಾಹನದ ಪ್ರಸ್ತುತ ಮಾರುಕಟ್ಟೆ ಮೌಲ್ಯವನ್ನು ಸಂಬಂಧಪಟ್ಟ ಪ್ರಾಧಿಕಾರದಿಂದ ನಿರ್ಧರಿಸಿಕೊಂಡು ಹರಾಜು ನಿಯಮಗಳಂತೆ ಬಹಿರಂಗ ಹರಾಜಿನ ಮೂಲಕ ವಿಲೇವಾರಿ ಮಾಡಲು ಹಾಗೂ ಸ್ಥಿರೀಕರಣಕ್ಕಾಗಿ ಪ್ರಸ್ತಾವನೆಯನ್ನು ಸಲ್ಲಿಸಲು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2005ನೇ ಇಸವಿಯ ಮಾರ್ಚ್ ತಿಂಗಳ 5ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತ ಲೇಖನ ನೀಡಿ ನಂತರ ಗಣಕೀಕೃತಗೊಳಿಸಿ, ಪ್ರಾಧಿಕಾರದ ಸೀಲ್ ಮೊಹರಿನೊಂದಿಗೆ ಹೊರಡಿಸಲಾಗಿದೆ.)

**ಎ.ಎಸ್. ವಿಶ್ವರೂಪ**

ಪಿ.ಆರ್. 501

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್,
ಉತ್ತರ ಕನ್ನಡ ಜಿಲ್ಲೆ, ಕಾರವಾರ.

**ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಉತ್ತರ ಕನ್ನಡ ಜಿಲ್ಲೆ, ಕಾರವಾರ ರವರ ನ್ಯಾಯಾಲಯ**
**ನಂ: ಅಬಕಾರಿ/ಸಿಆರ್‌ಎಂ/ಡಿಟಿಸಿಆರ್/24/2004-05, ದಿನಾಂಕ: 5ನೇ ಮಾರ್ಚ್ 2005**

**ಉಪಸ್ಥಿತರು:** ಶ್ರೀ ಎ.ಎಸ್. ವಿಶ್ವರೂಪ, ಕೆ.ಇ.ಎಸ್.
ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಉತ್ತರ ಕನ್ನಡ ಜಿಲ್ಲೆ, ಕಾರವಾರ.

**ಫಿರ್ಯಾದಿ:** ಟಿ.ಕೆ. ಹರಿಕಂತ್ರ, ಅಬಕಾರಿ ಉಪ ನಿರೀಕ್ಷಕರು-1, ಗುಪ್ತ ವಾರ್ತಾ ವಿಭಾಗ, ಕಾರವಾರ.

**ವಿರುದ್ಧ**

**ಆರೋಪಿ:** ಅರುಣ ತಂದೆ ಶಿವಾನಂದ ನಾಯಕ, ಸಾ: ಕಣಗಿಲ್ ಪೋ: ಶೆಟಗೇರಿ, ತಾ: ಅಂಕೋಲಾ.

**ತೀರ್ಪು**

1. ಈ ಪ್ರಕರಣದ ಫಿರ್ಯಾದುದಾರರು ದಿನಾಂಕ: 12.06.2004 ರಂದು ತನ್ನ ಮೇಲಾಧಿಕಾರಿಗಳ ಮಾರ್ಗದರ್ಶನದಲ್ಲಿ ತನ್ನ ಸಿಬ್ಬಂದಿಗಳೊಂದಿಗೆ ಕಾರವಾರ ತಾಲ್ಲೂಕಿನ ಮಾಜಾಳಿ ತನಿಖಾ ಠಾಣೆಯ ಗೇಟಿನ ಹತ್ತಿರ ತನಿಖಾ ಠಾಣೆಯ ಸಿಬ್ಬಂದಿಯವರೊಂದಿಗೆ ವಾಹನಗಳನ್ನು ತಪಾಸಿಸುತ್ತಿದ್ದ ಸಮಯದಲ್ಲಿ ರಾತ್ರಿ 11.00 ಗಂಟೆಗೆ ಬಂದಂತಹ ಫಿಯೆಟ್ ಕಾರ್ ಸಂಖ್ಯೆ: ಜಿಡಿಇ-4143 ನಂಬರಿನ ಕಾರಿನ ಮುಂದಿನ ಸೀಟಿನ ಅಡಿಯಲ್ಲಿ ಗೋವಾ ರಾಜ್ಯದ ತಯಾರಿಕೆಯ 180 ಮಿ.ಲೀ.ನ 30 ಡಾಕ್ಟರ್ ಇಂಟರ್‌ನ್ಯಾಶನಲ್ ಬ್ರ್ಯಾಂಡಿ ಬಾಟ್ಲಿಗಳನ್ನು ಹಾಗೂ ಹಿಂದಿನ ಸೀಟಿನ ಅಡಿಯಲ್ಲಿ 750 ಮಿ.ಲೀ.ನ 10 ಸೋಲೊಫೈನ್ ಬ್ರ್ಯಾಂಡಿ ಬಾಟ್ಲಿಗಳನ್ನು ಆರೋಪಿತನು ಯಾವುದೇ ರೀತಿಯ ಪಾಸ್ ಅಥವಾ ಪರ್ಮಿಟ್ ಇಲ್ಲದೆ ಸಾಗಿಸುತ್ತಿದ್ದುದನ್ನು ಪತ್ತೆ ಹಚ್ಚಿದ್ದು, ಇದು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 11 ಮತ್ತು 14 ರಂತೆ ಅಪರಾಧವಾಗಿರುವುದಾಗಿ ಹಾಗೂ ಕಲಂ 32, 34 ಮತ್ತು 38 (ಎ) ರಂತೆ ಶಿಕ್ಷಾರ್ಹವಾಗಿರುವುದಾಗಿ ಮುಂದಿನ ಜಪ್ತು ಕ್ರಮ ಜರುಗಿಸಿ, ಅಬಕಾರಿ ಉಪ ನಿರೀಕ್ಷಕರು-1, ಗುಪ್ತ ವಾರ್ತಾ ವಿಭಾಗ, ಕಾರವಾರ ಇವರ ಗುನ್ನೆ ಸಂಖ್ಯೆ: ಇಎಕ್ಸ್/ಇಐಬಿ/ಎಸ್‌ಐಇ-1/ಎಫ್.ಐ.ಆರ್. ನಂ.25/2003-04, ದಿನಾಂಕ: 29.03.2004 ರಂತೆ ಗುನ್ನೆಯನ್ನು ದಾಖಲಿಸಿ, ಗುನ್ನೆಗೆ ಸಂಬಂಧಿಸಿದ ಪ್ರ.ಮಾ. ವರದಿ, ಪಂಚನಾಮೆಯ ನಕಲು ಹಾಗೂ ಸ್ವತ್ತಿನ ಪಟ್ಟಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ಜಪ್ತಿಯಾದ ಸ್ವತ್ತುಗಳ ವಿವರ ಈ ಕೆಳಗಿನಂತಿದೆ.

1. 750 ಮಿ.ಲೀ.ನ ಸೋಲೊಫೈನ್ ಬ್ರಾಂಡಿಯ ಪ್ಲಾಸ್ಟಿಕ್ ಬಾಟ್ಲಿಗಳು - 10
2. 180 ಮಿ.ಲೀ.ನ ಡಾಕ್ಟರ್ ಇಂಟರ್‌ನ್ಯಾಶನಲ್ ಬ್ರ್ಯಾಂಡಿಯ ಪ್ಲಾಸ್ಟಿಕ್ ಬಾಟ್ಲಿಗಳು - 30
3. ಒಂದು ಫಿಯೆಟ್ ಕಾರ್ ರಿಜಿಸ್ಟ್ರೇಶನ್ ನಂ. ಜಡ್‌ಇ-4143

2. ಈ ಪ್ರಕರಣದ ತನಿಖಾಧಿಕಾರಿಗಳಾದ ಅಬಕಾರಿ ಉಪ ನಿರೀಕ್ಷಕರು-1, ಗುಪ್ತ ವಾರ್ತಾ ವಿಭಾಗ, ಕಾರವಾರ ಇವರ ಪತ್ರ ಸಂಖ್ಯೆ: ದಿನಾಂಕ: 21.08.2004 ರಂತೆ ಈ ಪ್ರಕರಣದಲ್ಲಿ ತೆಗೆಯಲಾದ ಮಾದರಿ ಸೀಸೆಗಳ ಬಗೆಗಿನ ರಾಸಾಯನಿಕ ವರದಿಯ ನಕಲನ್ನು ಲಗತ್ತಿಸಿ, ಜಪ್ತಿಯಾದ ಗೋವಾ ರಾಜ್ಯದ ತಯಾರಿಕೆಯ ಮದ್ಯ ಹಾಗೂ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಲು ವಿನಂತಿಸಿರುತ್ತಾರೆ. ಲಗ್ತ ಇರುವ ರಾಸಾಯನಿಕ

